ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಪುಟಗಳು : 36 ರೂ. 28/- ಕನ್ನಡ-ಇಂಗ್ಲೀಷ್ ಮಾಸಿಕ

# ಬಾಪು ಪ್ರಪಂಚ

# BAAPU PRAPANCHA

ಸಂಪುಟ-06 • ಸಂಚಿಕೆ-04 • ಸೆಪ್ಟೆಂಬರ್ 2024



ಗಾಂಧಿ ಸ್ಮಾರಕ ನಿಧಿ
75ನೇ ವರ್ಷದ ಸಂಸ್ಮರಣೆಗಾಗಿ
**ಅಂತರ ರಾಷ್ಟ್ರೀಯ ವಿಚಾರ ಸಂಕಿರಣ**

## 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ

International Seminar to commemorate
**75th year of Gandhi Smarak Nidhi**

## Mahatma Gandhi for the 21st Century

ರೂ. 28/- BAAPU PRAPANCHA

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ-ಇಂಗ್ಲೀಷ್ ಮಾಸಿಕ ಸಂಪುಟ-06 • ಸಂಚಿಕೆ-04 • ಸೆಪ್ಟೆಂಬರ್ 2024

**05** 21 ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ - ಮುಖ್ಯ ಮಂತ್ರಿಗಳ ಭಾಷಣ

**10** ಗಾಂಧಿ ಸ್ಮಾರಕ ನಡೆದು ಬಂದ ದಾರಿ ..ಎನ್ ಆರ್ ವಿಶುಕುಮಾರ್

**12** ಗಾಂಧಿ ಮತ್ತು ಕರ್ನಾಟಕ (ಭಾಗ-16)

**19** ಮಹಾತ್ಮ ಗಾಂಧಿ ವಿಚಾರ ಸಂಕಿರಣ : ಚಿತ್ರ ಸಂಪುಟ



ಕರ್ನಾಟಕ ಗಾಂಧಿ ಸ್ಮಾರಕ ನಿಧಿ

**ಬಾಪು ಪ್ರಪಂಚ**
ಕನ್ನಡ-ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಎನ್. ಆರ್. ವಿಶುಕುಮಾರ್**

Editor :
**N R Vishukumar**

**ಪ್ರಕಾಶಕರು :**
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**Printastic**
272, 2nd Main Road, 6th Cross,
Lavakushanagar, Laggere Bangalore-58
Ph : +91 9886747417
E-mail : printastic.21@gmail.com





Design : **Ujwal Creations,** Bangalore




ಮಾನ್ಯರೆ,

ಗಾಂಧಿ ಸ್ಮಾರಕ ನಿಧಿಯ 75 ನೇ ವರ್ಷದ ಸಂಸ್ಮರಣೆಗಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬೆಂಗಳೂರಿನ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ " 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ " ಅಂತರ ರಾಷ್ಟ್ರೀಯ ವಿಚಾರ ಸಂಕಿರಣ ಯಶಸ್ವಿಯಾಗಿ ನಡೆಯಿತು. ಈ ಅವಿಸ್ಮರಣೀಯ ಕಾರ್ಯಕ್ರಮದಲ್ಲಿ ನಾವು ಭಾಗಿಯಾಗಿದ್ದೆವು. ಅಲ್ಲಿ ಮಂಡಿತವಾದ ವಿಚಾರಗಳು ವೈವಿಧ್ಯಮಯವಾಗಿದ್ದವು .

**ಎಚ್ ಎನ್ ಮುರಳೀಧರ್ ಹಾಗೂ ಗೆಳೆಯರ ಬಳಗ**

**ಬೆಂಗಳೂರು**

* * *

ಮಾನ್ಯರೆ,

ಮಹಾತ್ಮ ಗಾಂಧೀಜಿಯವರ ಆಚಾರ ವಿಚಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಮಹೋದ್ದೇಶದಿಂದ ಸ್ಥಾಪಿತವಾಗಿರುವ ಗಾಂಧಿ ಸ್ಮಾರಕ ನಿಧಿಯ ಜವಾಬ್ದಾರಿ ಈಗ ಹಿಂದಿಗಿಂತ ಹೆಚ್ಚಾಗಿದೆ. ಗಾಂಧೀಜಿಯವರ ಮುಖ್ಯ ಆಶಯವಾಗಿದ್ದ ಕೋಮು ಸಾಮರಸ್ಯವನ್ನು ಕದಡುವ ಮನೋವೃತ್ತಿಯ ಜನರ ಮನ ಓಲೈಸುವ ಕಾರ್ಯ ಆಗಬೇಕು. ಅಹಿಂಸೆಯೇ ನಮ್ಮ ಬದುಕಾಗ ಬೇಕು. ಈ ನಿಟ್ಟಿನಲ್ಲಿ ಯುವ ಸಮುದಾಯಕ್ಕೆ ಗಾಂಧಿ ವಿಚಾರಗಳನ್ನು ತಲುಪಿಸುವ ಮಹತ್ಕಾರ್ಯ ಗಾಂಧಿ ಸ್ಮಾರಕ ನಿಧಿಯ ಮುಂದಿದೆ. ಇದನ್ನು ಸಾಧಿಸಲೇ ಬೇಕು.

* * *

**ಮಹಾಂತೇಶ, ಬೆಂಗಳೂರು**

* * *

ಮಾನ್ಯರೆ,

ಇತ್ತೀಚಿಗೆ ಯಶಸ್ವಿಯಾಗಿ ನಡೆದ "21 ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ" ಅಂತರ ರಾಷ್ಟ್ರೀಯ ವಿಚಾರ ಸಂಕಿರಣ ಗಾಂಧೀಜಿಯವರ ಪ್ರಸ್ತುತತೆಯನ್ನು ಸಾಬೀತು ಪಡಿಸಿದೆ. ಗಾಂಧೀಜಿ ಮಹಿಳೆಯರ ಸುಧಾರಣೆಯ ಬಗ್ಗೆ ವಿಶೇಷ ಒಲವನ್ನು ಇಟ್ಟು ಕೊಂಡಿದ್ದರು. ಆದರೆ ವಿಚಾರ ಸಂಕಿರಣದಲ್ಲಿ ವಿಷಯ ಮಂಡನೆ ಮಾಡಿದವರಲ್ಲಿ ಮಹಿಳೆಯರ ಕೊರತೆ ಎದ್ದು ಕಾಣುತ್ತಿತ್ತು. ಇದನ್ನು ಮುಂದಿನ ದಿನಗಳಲ್ಲಿ ಗಾಂಧಿ ಸ್ಮಾರಕ ನಿಧಿ ಸರಿಪಡಿಸಿಕೊಳ್ಳಬೇಕು.

**ಸಾವಿತ್ರಿ, ಹಾಸನ**




ಪ್ರಿಯರೆ,

ಬಾಪೂ ಪ್ರಪಂಚ ಸಂಚಿಕೆಯ ಬಗ್ಗೆ ಓದುಗರು ವ್ಯಕ್ತಪಡಿಸುತ್ತಿರುವ ಸದಭಿಪ್ರಾಯಗಳಿಗೆ ಗಾಂಧಿ ಸ್ಮಾರಕ ನಿಧಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಿಮ್ಮ ಅಪೇಕ್ಷೆಯಂತೆ ಬಾಪೂ ಪ್ರಪಂಚ ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಲು ಪ್ರಯತ್ನಿಸುತ್ತೇವೆ.

**ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು ಮತ್ತು ಬಾಪೂ ಪ್ರಪಂಚದ ಇತ್ತೀಚಿನ ಸಂಚಿಕೆಗಳನ್ನು https://gandhibhavan.in ಜಾಲತಾಣದಲ್ಲಿ ವೀಕ್ಷಿಸಿ.**



ಚಂದಾ ಕಳುಹಿಸುವ ಮತ್ತು ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುವ ವಿಳಾಸ :

**ಸಂಪಾದಕರು, ಬಾಪು ಪ್ರಪಂಚ**
ಗಾಂಧಿ ಭವನ
ಕುಮಾರ ಪಾರ್ಕ್ ಪೂರ್ವ,
ಬೆಂಗಳೂರು –560001
gandhibhavanabengaluru@gmail.com




**ಬಾಪು ಪ್ರಪಂಚ ಪತ್ರಿಕೆಯ ವಾರ್ಷಿಕ ಚಂದಾ ಹಣ 250 ರೂಗಳನ್ನು ಈ ಕೆಳಗಿನ ಕ್ಯೂಆರ್ ಕೋಡ್ ಮೂಲಕ ಪಾವತಿಸಿ, ನಿಮ್ಮ ಅಂಚೆ ವಿಳಾಸವನ್ನು ಗಾಂಧಿ ಭವನದ ಮೇಲಿನ ವಿಳಾಸಕ್ಕೆ ಹಣ ಪಾವತಿ ವಿವರಗಳ ಜೊತೆ ಕಳುಹಿಸಿ.**

# 21ನೇ ಶತಮಾನಕ್ಕೆ ಬೇಕಾದ ಗಾಂಧಿ

ನವದೆಹಲಿಯ ಗಾಂಧಿ ಸ್ಮಾರಕ ನಿಧಿ ಸ್ಥಾಪನೆಗೊಂಡ 75ನೇ ವರ್ಷದ ಸಂಸ್ಮರಣೆ ಅಂಗವಾಗಿ ಹಮ್ಮಿಕೊಂಡಿರುವ '21 ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ಎನ್ನುವ ಹೆಸರಿನಲ್ಲಿ ಆಯೋಜಿಸಿರುವ ಅಂತರರಾಷ್ಟ್ರೀಯ ವಿಚಾರ ಸಂಕಿರಣವನ್ನು ಅತ್ಯಂತ ಸಂತೋಷದಿಂದ ಉದ್ಘಾಟಿಸಿದ್ದೇನೆ.

ಗಾಂಧೀಜಿ ಹುಟ್ಟಿದ್ದು 19 ನೆ ಶತಮಾನದ ಕಡೆಯಲ್ಲಿ [ಅಕ್ಟೋಬರ್ –2–1869] 19ನೆ ಶತಮಾನದ ಕಡೆಯ ದಶಕಗಳು. ಇಂದು ನಾವು ಯಾವುದನ್ನು ಆಧುನಿಕತೆ ಎಂದು ಕರೆಯುತ್ತೇವೊ ಅಂಥ ದಿನಗಳ ಆರಂಭ ಮಾತ್ರ ಆಗಿತ್ತು.

ಗಾಂಧೀಜಿಯವರು 19 ಮತ್ತು 20ನೆ ಶತಮಾನಕ್ಕೆ ಎಷ್ಟು ಅವಶ್ಯಕವಾಗಿದ್ದರು ಎಂಬುದು ನಮಗೆಲ್ಲ ಗೊತ್ತಿದ್ದರೂ ಅವರು 21ನೆ ಶತಮಾನಕ್ಕೆ ಕಳೆದ ಶತಮಾನಗಳಿಗಿಂತ ಹೆಚ್ಚು ಅಗತ್ಯವಾಗಿದ್ದಾರೆ ಎಂಬುದು ಇತ್ತೀಚಿನ ವಿದ್ಯಮಾನಗಳನ್ನು ನೋಡಿದರೆ ಅರ್ಥವಾಗುತ್ತದೆ. ನೀವು ಇಡೀ ಜಗತ್ತಿನ ವಿಷಯವನ್ನು ಗಮನದಲ್ಲಿಟ್ಟುಕೊಂಡು ಈ ವಿಷಯವನ್ನು ವಿಚಾರ ಸಂಕಿರಣಕ್ಕೆ ಇಟ್ಟಿದ್ದಿರಿ . ಇದನ್ನು ಅಂತರರಾಷ್ಟ್ರೀಯ ವಿಚಾರ ಸಂಕಿರಣ ಮಾಡಿದ್ದೀರಿ. ಇದು ಒಳ್ಳೆಯ ವಿಚಾರವೆ.

ಗಾಂಧಿ ಭವನದ ಪದಾಧಿಕಾರಿಗಳು ಒಳ್ಳೆಯ ಕೆಲಸ ಮಾಡಿದ್ದೀರಿ. 21ನೆ ಶತಮಾನಕ್ಕೆ ಬೇಕಾದ ಗಾಂಧೀಜಿ ಎಂಬ ವಿಷಯದ ಕುರಿತು ಮಾತನಾಡಲು ನನಗಂತೂ ಸಂತೋಷವಿದೆ.

ಜಗತ್ತಿನ ಮನುಷ್ಯ ಕುಲ ಇಂದು ಅಳಿವು ಉಳಿವಿನ ಸಮಸ್ಯೆಯನ್ನು ಎದುರಿಸುತ್ತಿದೆ. ಇತ್ತೀಚೆಗೆ ನಿಧನ ಹೊಂದಿದ ಜಗತ್ತಿನ ಸಾರ್ವಕಾಲಿಕ ಶ್ರೇಷ್ಠ ವಿಜ್ಞಾನಿಯೆಂದು ಕರೆಸಿಕೊಳ್ಳುತ್ತಿದ್ದ ಸ್ಟೀಫನ್ ಹಾಕಿಂಗ್ ಎಂಬ ವಿಜ್ಞಾನಿಯು ಮನುಷ್ಯರ ಪಾಲಿಗೆ 21ನೆ ಶತಮಾನ ಕಡೆಯ ಶತಮಾನ ಎಂದು ಹೇಳಿದ್ದಾನೆ. ಆತ ಅದಕ್ಕೆ ಕಾರಣಗಳನ್ನೂ ಕೊಟ್ಟಿದ್ದಾನೆ .

ಸ್ಟೀಫನ್ ಹಾಕಿಂಗ್ ಪ್ರಕಾರ ಈ ಭೂಮಿ ಮೇಲಿನಿಂದ ಮನುಷ್ಯ ಅಳಿದು ಹೋಗಲು ಮುಖ್ಯ ಕಾರಣ ;

1. ಜಗತ್ತಿನಲ್ಲಿ ಮನುಷ್ಯ ಮನುಷ್ಯರ ನಡುವೆ ಅಸಹನೆ ಹೆಚ್ಚುತ್ತಿದೆ. ಹೊಂದಾಣಿಕೆ, ಸೌಹಾರ್ದ ಎಂಬ ಅಮೂಲ್ಯ ಭಾವನೆಗಳು ವೇಗವಾಗಿ ಮರೆಯಾಗುತ್ತಿವೆ.
2. ಮನುಷ್ಯನ ಸ್ವಯಂಕೃತ ಅಪರಾಧಗಳ ಕಾರಣದಿಂದಾಗಿ ಜಾಗತಿಕ ತಾಪಮಾನ ಏರಿಕೆಯಾಗುತ್ತಿದೆ .. ಭೂಮಿ ವೇಗವಾಗಿ ಬಿಸಿಯಾಗುತ್ತಿದೆ. ಬರ ಮತ್ತು ಪ್ರವಾಹಗಳು ಹಿಂದಿಂದೆಯೇ ಬಂದು ಅಪ್ಪಳಿಸುತ್ತಿವೆ.
3. ಜಾಗತಿಕ ಭಯೋತ್ಪಾದನೆ ಹೆಚ್ಚುತ್ತಿದೆ. ಜಗತ್ತು ನಾಯಕತ್ವ ಕಳೆದುಕೊಂಡಿದೆ. ಪ್ರಮುಖ ದೇಶಗಳ ನಾಯಕರುಗಳು ಸರ್ವಾಧಿಕಾರಿಗಳಾಗುತ್ತಿದ್ದಾರೆ. ಇವರು ಸದಾ ಅಶಾಂತಿ, ಹಿಂಸೆ, ಯುದ್ಧಗಳಿಗೆ ಕರೆ ಕೊಡುತ್ತಿರುತ್ತಾರೆ. ತಮ್ಮ ದೇಶಗಳಲ್ಲಿ ದಮನಿತರು ಹಾಗೂ ಅಲ್ಪಸಂಖ್ಯಾತರ ಮೇಲೆ ಬಹುಸಂಖ್ಯಾತರನ್ನು ಎತ್ತಿ ಕಟ್ಟುತ್ತಿರುತ್ತಾರೆ.




ಪರಸ್ಪರ ಹೊಂದಾಣಿಕೆ, ತಿಳಿವಳಿಕೆ, ಸಹನೆ, ಔದಾರ್ಯತೆಗಳು ನೆಲೆಸದಿದ್ದರೆ ಒಂದು ದಿನ ಮನುಷ್ಯರು, ಬಾಷೆ, ಬುಡಕಟ್ಟು, ಜಾತಿ, ಧರ್ಮ ಮುಂತಾದ ವಿಷಯಗಳಿಗಾಗಿಯೆ ಹೊಡೆದಾಡಿಕೊಂಡು ನಾಶವಾಗುವ ಬೀತಿ ಎದುರಾಗಿದೆ.

ಗಾಂಧೀಜಿಯವರು ಪದೇ ಪದೇ ಕೋಮು ಸೌಹಾರ್ದದ ಕುರಿತು ಮಾತನಾಡಿದ್ದರು. ಆಚರಣೆಯಲ್ಲಿಯೂ ಅವುಗಳನ್ನು ಅಳವಡಿಸಿಕೊಂಡಿದ್ದರು. ಅವರ ಪ್ರಯೋಗಗಳು 21 ನೇ ಶತಮಾನದಲ್ಲಿ ಹಿಂದೆಂದಿಗಿಂತಲೂ ಹೆಚ್ಚು ಪ್ರಸ್ತುತತೆ ಪಡೆದುಕೊಳ್ಳುತ್ತಿವೆ.

ಕೋಮು ಸೌಹಾರ್ದ ಸಾಧ್ಯವಾಗಬೇಕಾದರೆ ಆಯಾ ದೇಶದಲ್ಲಿನ ಯಾವುದೇ ರೀತಿಯ ಅಲ್ಪ ಸಂಖ್ಯಾತರ ಹಿತಾಸಕ್ತಿಯನ್ನು, ಸಂಸ್ಕೃತಿ, ಬಾಷೆ, ಆಸ್ತಿ – ಪಾಸ್ತಿಗಳನ್ನು ರಕ್ಷಿಸ ಬೇಕು .ಈ ವಿಚಾರ ಕೂಡ ಇಂದು ಅಂತರರಾಷ್ಟೀಯ ಸನ್ನದ್ಧಾಗಿದೆ.

ಭಾರತದಲ್ಲಿ ಜಾತಿಯು ಸಮಗ್ರ ರೂಪದ ಶಾಪವಾಗಿದೆ ಎಂದು ಎರಡನೆಯ ಹಂತದಲ್ಲಿ ಗಾಂಧೀಜಿಯವರಿಗೆ ಮನವರಿಕೆಯಾಯಿತು. ಜಾತಿಯು ಕೆಲವರಿಗೆ ಸಾಮಾಜಿಕ ಸಂಪತ್ತು. ಆ ಸಂಪತ್ತನ್ನು ಬಳಸಿಕೊಂಡೇ ಕೆಲವರು ರಾಜಕೀಯ– ಆರ್ಥಿಕ ಯಜಮಾನಿಕೆಯನ್ನು ಗಳಿಸಿಕೊಂಡಿದ್ದಾರೆ . ಯಾರಿಗೆ ಇದು ಸಾಧ್ಯವಾಗುವುದಿಲ್ಲವೊ ಅವರು ಶಾಶ್ವತವಾಗಿ ಗುಲಾಮಗಿರಿಯಲ್ಲಿಯೆ ಇರಬೇಕಾಗುತ್ತದೆ. ಹಾಗಾಗಿ ಜನರಲ್ಲಿ ಜಾತಿ ಪ್ರಜ್ಞೆಯನ್ನು ಹೋಗಲಾಡಿಸಲು ಗಾಂಧೀಜಿ ನಿರಂತರ ಪ್ರಯತ್ನ ಮಾಡಿದರು. ಜಾತಿ ವ್ಯವಸ್ಥೆಯಂತೆಯೆ ಬ್ರಿಟೀಷರು ಬಣ್ಣದ ಆಧಾರದ ಮೇಲೆ ಶ್ರೇಷ್ಠ–ಕನಿಷ್ಠ, ಆಳುವವನು–ಆಳಿಸಿಕೊಳ್ಳುವವನು ಎಂಬ ತತ್ವವನ್ನು ಮಾಡಿ ಭಾರತೀಯರನ್ನು, ಏಷ್ಯನ್ನರನ್ನು, ಆಫ್ರಿಕನ್ನರನ್ನು ಆಳಿದರು. ಹಾಗಾಗಿ ಶ್ರೇಷ್ಠ– ಕನಿಷ್ಠ ಎಂಬ ತಾರತಮ್ಯ ಮನೋಭಾವಗಳು ಮೊದಲು ತೊಲಗಬೇಕು ಎಂದು ಗಾಂಧೀಜಿ ಹೇಳಿದ್ದರು. ಈಗಲೂ ಜಾತಿ– ವರ್ಣ, ವರ್ಗ ಸಮಸ್ಯೆಗಳು ಮೊದಲಿಗಿಂತಲೂ ತೀವ್ರಗೊಂಡಿವೆ. ಆದ್ದರಿಂದ ಗಾಂಧೀಜಿ ಮೊದಲಿಗಿಂತಲೂ ಈಗ ಹೆಚ್ಚು ಪ್ರಸ್ತುತವಾಗಿದ್ದರೆ . ಬಹುಶಃ ಈ ಹಿನ್ನೆಲೆಯಲ್ಲಿಯೆ ಐನ್ ಸ್ಟೈನ್ ಎಂಬ ವಿಜ್ಞಾನಿ ಗಾಂಧೀಜಿ ಪ್ರತಿಪಾದಿಸುತ್ತಿರುವ inclusiveness and Non Violence ಎಂಬ ವಿಚಾರಗಳು ಮಾತ್ರ

4. ಆರ್ಟಿಪಿಷಿಯಲ್ ಇಂಟೆಲಿಜೆನ್ಸ್ ಎಂಬ ತಾಂತ್ರಿಕ ಸಂಶೋಧನೆಯು ಮನುಷ್ಯರನ್ನು ನಿರುಪಯೋಗಿ ಜೀವಿಗಳನ್ನಾಗಿ ಮಾಡುತ್ತಿದೆ. ಮನುಷ್ಯ, ಯಂತ್ರಗಳ ಗುಲಾಮನಾಗುತ್ತಿದ್ದಾನೆ.
5. ಮನುಷ್ಯರ ದುರಾಸೆಯ ಕಾರಣಕ್ಕೆ ಮುಂದಿನ ಎಷ್ಟೋ ತಲೆಮಾರುಗಳಿಗೆ ಬೇಕಾದ ಸಂಪನ್ಮೂಲಗಳು ವೇಗವಾಗಿ ಖಾಲಿಯಾಗುತ್ತಿವೆ.

ಈ ಐದು ಕಾರಣಗಳನ್ನು ಸ್ಟೀಫನ್ ಹಾಕಿಂಗ್ ಕೊಟ್ಟಿದ್ದಾನೆ. ಆತನ ಪ್ರಕಾರ ಮನುಷ್ಯ ಎಂಬ ಜೀವಿಯು ಉಳಿಯಬೇಕಾದರೆ ಬೇರೆ ಗ್ರಹಗಳನ್ನು ಹುಡುಕಿಕೊಳ್ಳಬೇಕು ಅಥವಾ ಇರುವ ಭೂಮಿಯನ್ನು ವೇಗವಾಗಿ ಮೊದಲಿನ ಹಿಂದಿನ ಸ್ಥಿತಿಗೆ ತರಬೇಕು ಎಂಬುದಾಗಿದೆ.

ಸ್ಟೀಫನ್ ಹಾಕಿಂಗ್ 'Brief answers to the Big Questions' ಎಂಬ ಅಮೂಲ್ಯ ಪುಸ್ತಕದಲ್ಲಿ ಈ ಎಲ್ಲ ವಿಚಾರಗಳನ್ನು ಚರ್ಚಿಸಿದ್ದಾನೆ.

ಹಾಕಿಂಗನ ಮೊದಲ ಆತಂಕಕ್ಕೆ ಇದು ಉತ್ತರವಾಗಿದೆ.

ಗಾಂಧೀಜಿಯವರು ನಿರಂತರವಾಗಿ ಪ್ರತಿಪಾದಿಸುತ್ತಿದ್ದ ಅನೇಕ ವಿಚಾರಗಳು ಇಂದು ಅಂತರರಾಷ್ಟೀಯ ನಿಯಮಗಳಾಗಿವೆ. ಅವುಗಳಲ್ಲಿ ಮುಖ್ಯವಾಗಿ ಅನ್ಯ ಧರ್ಮ–ಪಂಥಗಳ ಜನರ ಆಚಾರ – ವಿಚಾರ, ನಂಬಿಕೆಗಳ ಬಗ್ಗೆ ಗೌರವ, ಆಸಕ್ತಿ ತೋರುವುದು. ಗಾಂಧೀಜಿಯವರು ಈ ವಿಚಾರವನ್ನು ತಮ್ಮ ಜೀವಿತಾವಧಿಯುದ್ದಕ್ಕೂ ಜೀವನ್ಮರಣದಂತೆ ಪಾಲಿಸಿದ್ದರು. ಎಲ್ಲರನ್ನೂ ಒಳಗೊಂಡು ಬಾಳುವ, ಯಾರನ್ನೂ ಹೊರಗಿಡದೆ ಇವ ನಮ್ಮವ ಎಂದು ಪರಿಭಾವಿಸಬೇಕು ಎಂದು ಪ್ರತಿಪಾದಿಸಿದ ಬುದ್ಧ, ಬಸವಣ್ಣ ಮುಂತಾದವರ ಆದರ್ಶಗಳನ್ನು ಗಾಂಧೀಜಿ ಬಾಯಿ ಮಾತಿನಲ್ಲಿ ಹೇಳದೆ ಜೀವನದಲ್ಲಿಯೂ ಅಳವಡಿಸಿಕೊಂಡರು.

ಗಾಂಧೀಜಿಯವರು ಬದುಕಿದ್ದ ಅವಧಿಯಲ್ಲಿಯೆ ಮೊದಲ ಮತ್ತು ಎರಡನೆಯ ಮಹಾಯುದ್ಧಗಳು ನಡೆದವು. ಈ ಯುದ್ಧದಲ್ಲಿ ಕೋಟ್ಯಾಂತರ ಸಾವು ನೋವುಗಳು ಸಂಭವಿಸಿದವು. ಪ್ರಪಂಚದ ಉತ್ತರ ಭಾಗದವರು ದಕ್ಷಿಣ ಬಾಗವನ್ನು ವಸಾಹತುವಾದದ ಹೆಸರಲ್ಲಿ ಲೂಟಿ ಹೊಡೆದರು. ಜಗತ್ತು ಕಂಡು ಕೇಳರಿಯದ ಮಟ್ಟಿಗೆ ರೋಗ ರುಜಿನಗಳಿಗೆ ತುತ್ತಾಯಿತು. ಇವುಗಳೆಲ್ಲದರ ಜೊತೆಗೆ ಹೊಸದಾಗಿಯೆಂಬಂತೆ ಅಸಂಖ್ಯಾತ ಕೋಮು ಸಂಘರ್ಷಗಳು ನಡೆದವು.

ಇದನ್ನೆಲ್ಲ ಗಮನಿಸಿದ್ದ ಗಾಂಧೀಜಿಯವರು ಎಲ್ಲದಕ್ಕಿಂತ ಮುಖ್ಯವಾಗಿ ಕೋಮು ಸಾಮರಸ್ಯ ಬಹಳ ಮುಖ್ಯ ಎಂದು ಹೇಳಿದ್ದರು. ಕೋಮು ವಿಚಾರದಲ್ಲಿ ಇಂದು ಇಡೀ ಜಗತ್ತೆ ಕೊತ ಕೊತ ಕುದಿಯುತ್ತಿದೆ. ಹಿಂದೂ–ಮುಸ್ಲಿಂ, ಬೌದ್ಧ– ಮುಸ್ಲಿಂ (ಶ್ರೀಲಂಕಾ ಮುಂತಾದ ಕಡೆ ), ಕ್ರೈಸ್ತ– ಮುಸ್ಲಿಂ ಯಹೂದಿ–ಮುಸ್ಲಿಂ ಮುಂತಾಗಿ ಜಗತ್ತು ಹಲವು ಬಿರುಕುಗಳಲ್ಲಿ ಸಿಲುಕಿಕೊಂಡಿದೆ . ಅನೇಕ ಕಡೆ ಯುದ್ಧಗಳು ನಡೆಯುತ್ತಿವೆ.

ಮನುಷ್ಯ ಕುಲಕ್ಕೆ ಆಶಾವಾದಿಯಾಗಿವೆ. ಎಂದು ಹೇಳಿದ್ದಾನೆ.

ಜಾಗತಿಕ ಪರಿಸರ ಬಿಕ್ಕಟ್ಟುಗಳು ಎಂಬ ಹಾಕಿಂಗನ ಎರಡನೆಯ ಆತಂಕ ಸರಿಯಾಗಿದೆ.

ಹಾಕಿಂಗನ ಮಾತುಗಳನ್ನು ಓದಿದ ಮೇಲೆ ನನಗೆ ನಿಜಕ್ಕೂ ಮುಂದಿನ ದಿನಗಳ ಬಗ್ಗೆ ಆತಂಕವಾಗುತ್ತಿದೆ. ಇಡೀ ಜಗತ್ತಿನ ಪ್ರಕೃತಿ ಭೀಕರವಾಗಿ ದಣಿದಿದೆ. ಪ್ರಕೃತಿಯ ಮೇಲಿನ ಹಲ್ಲೆಯಿಂದಾಗಿ ಅದು ಕೋಪಗೊಂಡಿದೆ. ನಮ್ಮ ಪಶ್ಚಿಮ ಘಟ್ಟಗಳ ಮೇಲೆ ವಿಪರೀತ ಅಭಿವೃದ್ಧಿ ಚಟುವಟಿಕೆಗಳನ್ನು ನಡೆಸಿದ ಕಾರಣಕ್ಕಾಗಿ ಇಡೀ ಬೆಟ್ಟ ಗುಡ್ಡಗಳೆ ಕರಗಿ ನೀರಿನಂತೆ ಹರಿಯುತ್ತಿವೆ. ಕೇರಳದಲ್ಲಿ, ನಮ್ಮ ಶಿರೂರಿನಲ್ಲಿ ನಡೆದ ಗುಡ್ಡ ಕುಸಿತ ಪ್ರಕರಣಗಳು ಇದಕ್ಕೆ ಸಾಕ್ಷಿ. ನಮ್ಮ ರಾಜಕಾರಣಿಗಳು ಈಗಲೂ ಓಟಿನ ರಾಜಕೀಯಕ್ಕಾಗಿ ಕ್ಷುಲ್ಲಕ ರಾಜಕಾರಣ ಮಾಡುತ್ತಾ ಕೂತಿದ್ದಾರೆ. ಸಿದ್ದರಾಮಯ್ಯ ಮುಖ್ಯಮಂತ್ರಿಯಾದರೆ ಮಳೆ ಬರುವುದಿಲ್ಲ ಎಂದು ಜನರಲ್ಲಿ ಹುಸಿ ನಂಬಿಕೆಯನ್ನು ಬಿತ್ತಲು ಪ್ರಯತ್ನಿಸುತ್ತಾರೆ. ರಾಜಕಾರಣಿಗಳು ತಮ್ಮ ಅಧಿಕಾರ ದಾಹಕ್ಕಾಗಿ ಜನರನ್ನು ಶಾಶ್ವತ ಮೌಢ್ಯದಲ್ಲಿ ಬೀಳಿಸಲು ಪ್ರಯತ್ನಿಸುತ್ತಾರೆ. ಇದಕ್ಕೆ ಮಾಧ್ಯಮಗಳೂ ತುಪ್ಪ ಸುರಿಯುತ್ತವೆ.

ಆದರೆ ಆಗುತ್ತಿರುವುದೇನು ? ಪೆಸಿಫಿಕ್ ಸಾಗರದಲ್ಲಿ ಉಂಟಾಗುವ ಉಷ್ಣ ಮತ್ತು ಶೀತ ಪ್ರವಾಹಗಳು–

(ಎಲ್ ನಿನೋ ಮತ್ತು ಲಾನಿನೊ ) ಜಗತ್ತಿನಲ್ಲಿ ಮಳೆ, ಪ್ರವಾಹ, ಬರಗಳಿಗೆ ಕಾರಣವಾಗುತ್ತಿವೆ . ಜಗತ್ತಿನ ಮನುಷ್ಯರು ತಮ್ಮ ಸ್ವಾರ್ಥ, ದುರಾಸೆಗಳ ಕಾರಣಕ್ಕಾಗಿ, ಐಷಾರಾಮಿ ಜೀವನಗಳಿಗಾಗಿ ಕಾಡು ಕಡಿದು, ಬೆಟ್ಟ ಬಗೆದು, ರಸ್ತೆ ಮಾಡಿ, ಡೀಸೆಲ್, ಪೆಟ್ರೋಲ್ ಉರಿಸಿ ಕಾರ್ಬನ್ ಡೈ ಆಕ್ಸೈಡ್ ಮುಂತಾದ ವಿಷಕಾರಿ ಹೊಗೆ ಬಿಟ್ಟು ಭೂಮಿಯನ್ನು ಮರುಭೂಮಿ ಮಾಡುತ್ತಿದ್ದಾರೆ . ಇದರಿಂದ ಭೂಮಿ ವೇಗವಾಗಿ ಬಿಸಿಯಾಗುತ್ತಿದೆ. ಇದು ಎಲ್–ನಿನೊ, ಲಾ–ನಿನೊಗಳಿಗೆ ಕಾರಣವಾಗುತ್ತಿದೆ. ಮನುಷ್ಯನ ಆರೋಗ್ಯಕಾರಕ ಬದುಕಿಗೆ ಪ್ರಕೃತಿಯ ಆರೋಗ್ಯ ಬಹಳ ಮುಖ್ಯ ಎಂಬ ಕಾರಣದಿಂದಾಗಿ ಗಾಂಧೀಜಿಯವರು " ಈ ಭೂಮಿಯು ಎಲ್ಲರ ಅಗತ್ಯಗಳನ್ನು ಪೂರೈಸುತ್ತದೆಯೇ ಹೊರತು ದುರಾಸೆಗಳನ್ನಲ್ಲ ಎಂದು ಹೇಳಿದ್ದರು. 21 ನೇ ಶತಮಾನದ ಈ ದಿನಗಳಲ್ಲಿ ಗಾಂಧೀಜಿಯವರ ಈ ಮಾತು ಹಿಂದಿಗಿಂತಲೂ ಹೆಚ್ಚು ಪ್ರಸ್ತುತವಾಗಿದೆ.

ಹಾಕಿಂಗನ ನಾಲ್ಕನೇ ಆತಂಕ ; ಮನುಷ್ಯನನ್ನು ಭೂಮಿ ಮೇಲಿನಿಂದ ಅಳಿಸಿ ಹಾಕಲು ನಿಂತಿರುವ ಆರ್ಟಿಫಿಷಿಯಲ್ ಇಂಟೆಲಿಜೆನ್ಸ್ ; ಜಗತ್ತು ಇಂದು ತಾಂತ್ರಿಕವಾಗಿ ಅನೇಕ ಆವಿಷ್ಕಾರಗಳನ್ನು ಮಾಡಿದೆ. ಮನುಷ್ಯರು ಮಾಡುವ ಕೆಲಸಗಳನ್ನು ರೊಬೋಟ್ ಗಳೆಂಬ ಯಂತ್ರಗಳೆ ಮಾಡಲು ಪ್ರಾರಂಭಿಸಿವೆ. ಆರ್ಟಿಪಿಷಿಯಲ್ ಇಂಟೆಲಿಜೆನ್ಸ್ ( ಇದನ್ನು ಕೃತಕ ಬುದ್ಧಿಮತ್ತೆ ಎಂದೂ ಕರೆಯಲಾಗುತ್ತಿದೆ ) ಎಂಬುದು ಮನುಷ್ಯರನ್ನು ನಿಯಂತ್ರಿಸುವ ದಿನಗಳು ಬಂದಿವೆ. ಮನುಷ್ಯ ಯಂತ್ರಗಳ ಗುಲಾಮನಾಗುತ್ತಿದ್ದಾನೆ. ಮನುಷ್ಯರ ಘನತೆ–ಗೌರವಗಳು ಮಣ್ಣು ಪಾಲಾಗುತ್ತಿವೆ. ಕಾರ್ಪೊರೇಟ್ ಬಂಡವಾಳಿಗ ಕುಳಗಳು ಯಂತ್ರಗಳನ್ನು ಆಧರಿಸಿದ ಉತ್ಪಾದನಾ ವಿಧಾನವನ್ನು ಹೆಚ್ಚೆಚ್ಚು ಬಳಸಲಾರಂಭಿಸಿದ್ದಾರೆ. ಇದರಿಂದಾಗಿ ವ್ಯಾಪಕ ನಿರುದ್ಯೋಗ, ಅಶಾಂತಿಗಳಿಗೆ ಕಾರಣವಾಗುತ್ತಿದೆ. ಇದರಿಂದ ಜಗತ್ತು ಡಿಜಿಟಿಲ್ ಡಿಕ್ಟೇಟರ್‌ಶಿಪ್ ಕಡೆಗೆ ನಡೆಯುತ್ತಿದೆ ಎಂಬುದು ಎಲ್ಲ ಮಾನವತಾವಾದಿಗಳ ಆತಂಕ.

ಜಗತ್ತಿನಲ್ಲಿ ಉಳ್ಳವರು ಮತ್ತು ಇಲ್ಲದವರ ನಡುವೆ ಅಂತರ ತೀವ್ರವಾಗಿ ಹೆಚ್ಚುತ್ತಿದೆ . ಅಸಮಾನತೆಯ ವಿಷಯದಲ್ಲಿ ಭಾರತ ಮತ್ತು ಜಗತ್ತಿನ ಪರಿಸ್ಥಿತಿ ಬಿನ್ನವಾಗಿಲ್ಲ. ಹಲವು ಅಧ್ಯಯನಗಳ ಪ್ರಕಾರ ಶೇ.1ರಷ್ಟು ಜನರ ಬಳಿ ಶೇ. 50 ರಷ್ಟು ಸಂಪತ್ತು ಶೇಖರವಾಗಿದೆ. ಶೇ.10 ರಷ್ಟು ಜನರ ಬಳಿ ಶೇ.85 ಸಂಪತ್ತು ಶೇಖರಣೆಗೊಂಡಿದೆ. ಯಂತ್ರ ನಾಗರೀಕತೆಯ ಕಾರಣಕ್ಕೆ ಬಡತನ ಹೆಚ್ಚಾಗುತ್ತದೆ. ಅಸಮಾನತೆ, ಅಶಾಂತಿಗಳು ಹೆಚ್ಚುತ್ತವೆ ಎಂಬುದನ್ನು ಗಾಂಧೀಜಿ ಮನಗಂಡಿದ್ದರು. ಗಾಂಧೀಜಿಯವರ ಆತಂಕ ಇಂದು ಸಂಪೂರ್ಣವಾಗಿ ನಿಜವಾಗಿದೆ ಎಂದು ಸಾಬೀತಾಗುತ್ತಿದೆ.

ಗಾಂಧೀಜಿ 1909 ರ ವೇಳೆಗೆ ಬರೆದ 'ಹಿಂದ್ ಸ್ವರಾಜ್' ಎಂಬ ಕೃತಿಯಲ್ಲಿ ಮನುಷ್ಯ ಘನತೆಯಿಂದ ಬಾಳಬೇಕಾದರೆ ಮಾಡಬೇಕಾದುದೇನು? ಎಂದು ವಿವರವಾಗಿ ಚರ್ಚಿಸಿದ್ದಾರೆ. ಅದರಲ್ಲಿ ಗಾಂಧೀಜಿ ಯಂತ್ರಗಳು ಮನುಷ್ಯನ ನಿಯಂತ್ರಣದಲ್ಲಿರಬೇಕು. ಸಾಧ್ಯವಾದಷ್ಟು ಮನುಷ್ಯನ ಕೈ ಕಾಲುಗಳಿಗೆ ಶ್ರಮ ಕೂಡುವ ಸರಳ ಯಂತ್ರಗಳಾದ ನೇಗಿಲು, ಚರಕ, ರಾಟೆ ಮುಂತಾದವುಗಳು ಮಾತ್ರ ಇರಲಿ ಎಂದಿದ್ದಾರೆ. ಆದರೆ ಬೃಹತ್ ನಾಗರಿಕತೆಯು ಇಂದು ಗಾಂಧೀಜಿಯಂತವರ ವಿಚಾರಗಳನ್ನು ಸಂಪೂರ್ಣವಾಗಿ ಕಬಳಿಸಿ ಬಿಟ್ಟಿದೆ .

ಅನೇಕ ಸಾರಿ ನಾನು ಗಾಂಧೀಜಿ ಯಾಕೆ ಈ ಮಾತುಗಳನ್ನು ಹೇಳಿರಬಹುದು ಎಂದು ಯೋಚಿಸುತ್ತೇನೆ. ಮುಂಬೈ, ಲಂಡನ್, ಡರ್ಬಾನ್ ಮುಂತಾದ ನಗರಗಳನ್ನು ನೋಡಿದ್ದ ಗಾಂಧೀಜಿಯವರಿಗೆ ನಗರೀಕರಣದ ವಿಕೃತಿಗಳೆಲ್ಲವೂ ಅರ್ಥವಾಗಿದ್ದವು.

ಉದಾಹರಣೆಗೆ ಅಂದಿನ ಭಾರತದ ಮೊದಲ ರೈಲು ಪ್ರಾರಂಭವಾಗಿದ್ದು 1853 ರಲ್ಲಿ. ಮೊದಲ ಕಾರ್ಖಾನೆ ( ಆಧುನಿಕ ಹತ್ತಿ



ಗಿರಣಿ ) ಪ್ರಾರಂಭವಾಗಿದ್ದು 1854 ರಲ್ಲಿ, ಮುಂಬೈನಲ್ಲಿ. ದೇಶದಲ್ಲಿ ಮೊದಲ ವಿದ್ಯುತ್ ಪ್ರಾರಂಭವಾಗಿದ್ದು 1905 ರಲ್ಲಿ. ಮೊದಲ ಬಸ್ ಸಂಚಾರ ಪ್ರಾರಂಭವಾಗಿದ್ದು1926 ರಲ್ಲಿ. ಮೊದಲ ವಿಮಾನ 1911 ರಲ್ಲಿ. ವಿದ್ಯುತ್, ರೈಲು, ಬಸ್ಸು, ವಿಮಾನಗಳು ಬಂದ ಮೇಲೆ ದೇಶವನ್ನು ವೇಗವಾಗಿ ಲೂಟಿ ಹೊಡೆದು ಸಾಗಿಸಲು ಸಾಧ್ಯವಾಯಿತು.

ಇದರ ಜೊತೆಗೆ ಗಾಂಧೀಜಿಯವರಿಗೆ ತಾಂತ್ರಿಕತೆಯ ಪ್ರಗತಿ ಮತ್ತು ನಗರೀಕರಣಗಳ ಕುರಿತು ಹಲವು ರೀತಿಯ ತಕರಾರುಗಳಿದ್ದವು. ಮನುಷ್ಯ ಮಾನಸಿಕವಾಗಿ ಬದಲಾವಣೆ ಹೊಂದದೆ, ಆಧುನಿಕನಾಗದೆ ಭೌತಿಕವಾಗಿ ಮಾತ್ರ ಬದಲಾವಣೆಯಾದರೆ ಅದರ ವಿಕೃತಿಗಳನ್ನು ಅನುಭವಿಸಬೇಕಾಗುತ್ತದೆ ಎಂದು ಗಾಂಧೀಜಿ ನಂಬಿದ್ದರು. ಆಧುನೀಕರಣ ಮತ್ತು ಕೈಗಾರೀಕರಣಗಳು ಮನುಷ್ಯನ ಚೈತನ್ಯವನ್ನು ಹಾಳು ಮಾಡುತ್ತವೆ ಎಂದು ಅವರು ನಂಬಿದ್ದರು.

ಭಾರತದಲ್ಲಿ ಬಲಪಂಥೀಯರೆಂದು ಕರೆಸಿಕೊಳ್ಳುತ್ತಿರುವ ಬಿಜೆಪಿ ಆರೆಸ್ಸೆಸ್, ಬಜರಂಗ ದಳ, ವಿಶ್ವ ಹಿಂದೂ ಪರಿಷತ್ ಮುಂತಾದ ಸಂಘಟನೆಗಳು, ಜರ್ಮನಿಯ ನಾಜಿ, ಇಟಲಿಯ ಫ್ಯಾಸಿಸ್ಟ್ ಸಂಘಟನೆಗಳಂತೆಯೆ ಮನುಷ್ಯ ಕುಲಕ್ಕೆ ಅಪಾಯಕಾರಿಯಾಗಿವೆ. ಇದೇ ಮನಸ್ಥಿತಿಯ ಜನರೇ ಗಾಂಧೀಜಿಯವರನ್ನು ಕೊಲೆ ಮಾಡಿದರು.

ಜಗತ್ತಿನಲ್ಲಿರುವ ಎಲ್ಲ ಧಾರ್ಮಿಕ ಸಂಘಟನೆಗಳು, ಧರ್ಮದ ಆಧಾರದ ಮೇಲೆ ನಡೆಯುತ್ತಿರುವ ರಾಜಕೀಯ ಪಕ್ಷಗಳು ಮನುಷ್ಯ ಕುಲಕ್ಕೆ ಕಂಟಕಗಳಾಗಿವೆ . ಈ ಬಲಪಂಥೀಯ ಎನಿಸಿ ಸಂಘಟನೆಗಳು ಎಲ್ಲ ಧರ್ಮಗಳಲ್ಲಿಯೂ ಇವೆ. ಇಸ್ಲಾಂನಲ್ಲಿಯೂ ಇವೆ , ಬೌದ್ಧರಲ್ಲೂ ಇವೆ, ಕ್ರಿಶ್ಚಿಯನ್ನರಲ್ಲೂ ಇವೆ. ಇವು ಆಯಾ ದೇಶದ ಅಲ್ಪ ಸಂಖ್ಯಾತರ ವಿರುದ್ಧ, ಅಂಚಿನ ಸಮುದಾಯಗಳ ವಿರುದ್ದ, ಮಹಿಳೆಯರ ವಿರುದ್ಧ ಇರುತ್ತವೆ. ಮಹಿಳೆಯರು ಮಕ್ಕಳನ್ನು ಹೆರುವ ಯಂತ್ರಗಳು ಎಂದೇ ಇವು ಭಾವಿಸುತ್ತವೆ. ಹಾಗಾಗಿ ಇವುಗಳನ್ನು ತಿರಸ್ಕರಿಸದಿದ್ದರೆ ಮನುಷ್ಯ ಕುಲಕ್ಕ ಅಪಾಯಕಾರಿಯಾಗುತ್ತವೆ. ಈಗಾಗಲೆ ಅವುಗಳು ಅಂಥ ಹಾದಿಯಲ್ಲಿವೆ.

ದೇಶದಲ್ಲಿ ಬಿಜೆಪಿ ಮತ್ತು ಅದರ ಅಂಗಸಂಸ್ಥೆಗಳು ಗಾಂಧೀಜಿಯನ್ನು ಕೊಂದದ್ದು ಸರಿ ಎಂಬ ವಾದವನ್ನು ಆಗಾಗ ಮಂಡಿಸುತ್ತವೆ . ಗೋಡ್ಸೆಯನ್ನು ಆರಾಧಿಸುತ್ತವೆ . ಬಾರತದಲ್ಲಿ ಗಾಂಧೀಜಿಯವರ ಕೊಲೆಯ ಮೂಲಕ ವಿಶ್ವದ ಮನುಷ್ಯರ ವಿನಾಶಕ್ಕೆ ಬರೆದ ಮುನ್ನುಡಿ ಎಂದು ನಾನು ಭಾವಿಸಿದ್ದೇನೆ.

ಮಹಾತ್ಮ ಗಾಂಧೀಜಿಯವರ ಬೋಧನೆಗಳು ಮತ್ತು ತತ್ವಗಳು ಕಾಲ ಮತ್ತು ಗಡಿಗಳನ್ನು ಮೀರಿದ್ದು. ನಾಗರಿಕ ಹಕ್ಕುಗಳು, ಸಾಮಾಜಿಕ ನ್ಯಾಯ ಮತ್ತು ಸುಸ್ಥಿರ ಅಭಿವೃದ್ಧಿಗಾಗಿ ಜಗತ್ತಿನಾದ್ಯಂತ ನಡೆದ ಚಳವಳಿಗಳ ಮೇಲೆ ಪ್ರಭಾವ ಬೀರಿವೆ. ಗಾಂಧೀಜಿಯವರ ದೃಷ್ಟಿಕೋನ ಭಾರತದ ಸ್ವಾತಂತ್ಯ ಹೋರಾಟಕ್ಕೆ ಸೀಮಿತವಾಗಿರಲಿಲ್ಲ; ಇದು ಸತ್ಯ, ಅಹಿಂಸೆ ಮತ್ತು ಕರುಣೆಯ ತತ್ವಗಳ ಮೂಲಕ ಮಾನವೀಯತೆಯನ್ನು ಮೇಲಕ್ಕೆತ್ತುವ ಸಾರ್ವತ್ರಿಕ ದೃಷ್ಟಿಕೋನವಾಗಿದೆ.

ಗಾಂಧೀಜಿಯವರ ತತ್ವಗಳು 21ನೇ ಶತಮಾನದಲ್ಲೂ ಪ್ರಸ್ತುತವಾಗಿವೆ. ಪ್ರಪಂಚವು ಹೆಚ್ಚುತ್ತಿರುವ ಅಸಮಾನತೆ, ಪರಿಸರದ ಅವನತಿ, ಸಂಘರ್ಷಗಳು ಮತ್ತು ಬೆಳೆಯುತ್ತಿರುವ ಸಾಮಾಜಿಕ ಪರಕೀಯತೆಯಂತಹ ಸಮಸ್ಯೆಗಳನ್ನು ಎದುರಿಸುತ್ತಿದೆ. ಇಂತಹ ಸಮಯದಲ್ಲಿ ಗಾಂಧೀಜಿಯವರ ಶಾಂತಿ, ನ್ಯಾಯ, ಭ್ರಾತೃತ್ವ ಮತ್ತು ಸುಸ್ಥಿರ ಅಭಿವೃದ್ದಿಯ ಆದರ್ಶಗಳು ಭರವಸೆಯ ದಾರಿದೀಪವನ್ನು ನೀಡುತ್ತವೆ.

ಗಾಂಧೀಜಿಯವರ ಪ್ರಜಾಪ್ರಭುತ್ವದ ಕಲ್ಪನೆಯು ಅಹಿಂಸೆಯ ಮೇಲಿನ ಅವರ ನಂಬಿಕೆಯೊಂದಿಗೆ ಆಳವಾಗಿ ಬೆಸೆದುಕೊಂಡಿತ್ತು. ಪ್ರಜಾಪ್ರಭುತ್ವದ ಶಕ್ತಿಯು ಜನರ ಇಚ್ಛೆಯನ್ನು ಎತ್ತಿಹಿಡಿಯುವ ಸಾಮರ್ಥ್ಯದಲ್ಲಿದೆ ಮತ್ತು ಅಹಿಂಸಾತ್ಮಕ ಮಾರ್ಗಗಳ ಮೂಲಕ ನಿಜವಾದ ಪ್ರಜಾಸತ್ತಾತ್ಮಕ ಆಡಳಿತವನ್ನು ಸಾಧಿಸಬಹುದು ಎಂದು ಅವರು ಬಲವಾಗಿ ನಂಬಿದ್ದರು.

ನಾವು ಇಂದು ಪ್ರಜಾಪ್ರಭುತ್ವದ ಆಶಯವನ್ನೇ ಬುಡಮೇಲು ಮಾಡುತ್ತಿರುವ ಪ್ರವೃತ್ತಿಯನ್ನು ನೋಡುತ್ತಿದ್ದೇವೆ. ಬಿಜೆಪಿ ನೇತೃತ್ವದ ಕೇಂದ್ರ ಸರ್ಕಾರವು ಪ್ರಜಾಸತ್ತಾತ್ಮಕ ಜನಾದೇಶವನ್ನು ಕಡೆಗಣಿಸಿ, ಬಹುಮತ ಹೊಂದಿರುವ ಚುನಾಯಿತ ಸರ್ಕಾರಗಳನ್ನು ಅಸ್ಥಿರಗೊಳಿಸುತ್ತಿದೆ . ಜನರ ಶಕ್ತಿ ಮತ್ತು ಪ್ರಜಾಸತ್ತಾತಕ ಸಂಸ್ಥೆಗಳ ಪಾವಿತ್ರ್ಯವನ್ನು ಪ್ರತಿಪಾದಿಸಿದ ಗಾಂಧೀಜಿಯವರು, ಇಂತಹ ಕ್ರಮಗಳನ್ನು ನಿಸ್ಸಂದೇಹವಾಗಿ ವಿರೋಧಿಸುತ್ತಿದ್ದರು.

ಗಾಂಧೀಜಿಯವರು ಯಾವುದೇ ಸಮಾಜವನ್ನು ಅದು ಅತ್ಯಂತ ದುರ್ಬಲ ವರ್ಗದವರನ್ನು ಹಾಗೂ ಮಹಿಳೆಯರನ್ನು ಹೇಗೆ ನಡೆಸಿಕೊಳ್ಳುತ್ತದೆ ಎಂಬುದರಿಂದ ಅಳೆಯಬಹುದು ಎಂದು ನಂಬಿದ್ದರು. ಗಾಂಧೀಜಿಯವರ ನ್ಯಾಯದ ಅನ್ವೇಷಣೆಯು ಇಂದು ಸಮಾಜದಲ್ಲಿ ಆಳವಾಗಿ ಬೇರೂರಿರುವ ಆರ್ಥಿಕ ಅಸಮಾನತೆ, ಸಾಮಾಜಿಕ ಅಸಮಾನತೆ ಮತ್ತು ತಾರತಮ್ಯಗಳನ್ನು ಹೋಗಲಾಡಿಸಬೇಕು ಎಂಬುದಾಗಿತ್ತು. ದುರ್ಬಲರನ್ನು ಮೇಲಕ್ಕೆ ಎತ್ತದಿದ್ದರೆ ಸಮಾಜದ ಪ್ರಗತಿ ಅರ್ಥಹೀನ ಎಂಬುದು ಗಾಂಧೀಜಿಯವರ ಸರ್ವೋದಯದ ಪರಿಕಲ್ಪನೆ .

ಗಾಂಧೀಜಿಯವರದು ಕೇವಲ ರಾಜಕೀಯ ಸ್ವಾತಂತ್ರ್ಯದ ಕಲ್ಪನೆಯಾಗಿರಲಿಲ್ಲ; ಬದಲಾಗಿ, ಪ್ರತಿಯೊಬ್ಬ ವ್ಯಕ್ತಿಯ, ವಿಶೇಷವಾಗಿ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಯಲ್ಲಿತ್ತು. ಅವರು ಕನಸು ಕಂಡಿದ್ದ – ಮಧ್ಯರಾತ್ರಿಯಲ್ಲಿ ಮಹಿಳೆ ನಿರ್ಭಯವಾಗಿ ನಡೆಯಬಹುದಾದ ನಿಜವಾದ ಸ್ವಾತಂತ್ರ್ಯವನ್ನು.

ದೇಶ ಇಂದು ಎಷ್ಟೇ ಸಾಧನೆ ಮಾಡಿದ್ದರೂ, ಮಹಿಳೆಯರು ಇಂದಿಗೂ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕ್ರೂರ ಅತ್ಯಾಚಾರಗಳು ಮತ್ತು ಮಹಿಳೆಯರ ಮೇಲಿನ ದೌರ್ಜನ್ಯದ ಪ್ರಕರಣಗಳು ಗಾಂಧೀಜಿಯವರ ಪರಿಕಲ್ಪನೆಯ ಸ್ವಾತಂತ್ರ್ಯವನ್ನು ತಲುಪುವಲ್ಲಿ ನಾವು ಇನ್ನೂ ದೂರ ಸಾಗಬೇಕಾಗಿದೆ ಎಂಬುದನ್ನು ಹೇಳುತ್ತವೆ. ನಮ್ಮ ತಾಯಂದಿರು, ಸಹೋದರಿಯರು ಮತ್ತು ಹೆಣ್ಣುಮಕ್ಕಳು ಭಯಭೀತರಾಗಿ ಬದುಕುವವರೆಗೂ ನಾವು ಇನ್ನೂ ನಿಜವಾಗಿಯೂ ಸ್ವತಂತ್ರರಾಗುವುದಿಲ್ಲ. ಇಂದಿನ ಗಾಂಧೀಜಿ, ಲಿಂಗ ಸಮಾನತೆಯ ಹೋರಾಟವನ್ನು ಮುಂದುವರಿಸಲು, ಮಹಿಳೆಯರು ಘನತೆ, ಭದ್ರತೆ ಮತ್ತು ಸ್ವಾತಂತ್ರ್ಯದಿಂದ ಬದುಕುವ ಸಮಾಜವನ್ನು ರಚಿಸಲು ನಮಗೆ ಸವಾಲು ಹಾಕುತ್ತಾರೆ.

ಮಣಿಪುರದಲ್ಲಿ ನಡೆದ ಮಹಿಳೆಯರ ಮೇಲಿನ ಭೀಕರ ಹಿಂಸಾಚಾರದ ಸಂದರ್ಭದಲ್ಲಿ ಕೇಂದ್ರದಲ್ಲಿರುವ ಬಿಜೆಪಿ ಸರ್ಕಾರದ ಮೌನವನ್ನು ಗಮನಿಸಬೇಕಾಗಿದೆ. ಮಹಿಳೆಯರ ಮೇಲಿನ ದೌರ್ಜನ್ಯದಂತಹ ಗಂಬೀರ ಅಪರಾಧಗಳ ಆರೋಪ ಹೊತ್ತಿರುವ ಬ್ರಿಜ್ ಭೂಷಣ್ ಅವರಂತಹ ವ್ಯಕ್ತಿಗಳಿಗೆ ಅವರ ಮೌನ

ಬೆಂಬಲವನ್ನು ಗಮನಿಸಬೇಕಾಗಿದೆ. ನಿರ್ದಾಕ್ಷಿಣ್ಯ ಶ್ರಮಗಳನ್ನು ತೆಗೆದುಕೊಳ್ಳದೆ, ಬಿಜೆಪಿಯು ಅಪಾಯಕಾರಿ ಸಂದೇಶವನ್ನು ರವಾನಿಸುತ್ತಿದೆ. ಮಹಿಳೆಯರ ಮೇಲಿನ ದೌರ್ಜನ್ಯವನ್ನು ಸಹಿಸಿಕೊಳ್ಳುವ ಮತ್ತು ಶಾಶ್ವತವಾಗಿ ಬೆಳೆಸುವ ಸಂಸ್ಕೃತಿಯನ್ನು ಪ್ರೋತ್ಸಾಹಿಸುತ್ತದೆ . ಗಾಂಧೀಜಿಯವರು ಇಂತಹ ಉದಾಸೀನತೆಗಳನ್ನು ಕಟುವಾಗಿ ವಿರೋಧಿಸುತ್ತಿದ್ದರು ಮತ್ತು ಮಹಿಳೆಯರ ಹಕ್ಕುಗಳು ಮತ್ತು ಸುರಕ್ಷತೆಗಾಗಿ ನಿಲ್ಲುವಂತೆ ನಮ್ಮನ್ನು ಒತ್ತಾಯಿಸುತ್ತಿದ್ದರು. ಗಾಂಧೀಜಿಯವರು ಯಾವುದೇ ರೀತಿಯ ಹಿಂಸಾಚಾರವನ್ನು ಖಂಡಿಸುತ್ತಾರೆ ಮತ್ತು ಅದಕ್ಕೆ ಕಾರಣವಾದವರನ್ನು ಹೊಣೆಗಾರರನ್ನಾಗಿ ಮಾಡುತ್ತಾರೆ.

ಗಾಂಧೀಜಿಯವರ ಭ್ರಾತೃತ್ವದ ಕಲ್ಪನೆಯು ವಸುಧೈವ ಕುಟುಂಬಕಂ – ಜಗತ್ತು ಒಂದೇ ಕುಟುಂಬ ಎಂಬುದರಲ್ಲಿ ಬೇರೂರಿದೆ. ನಾವೆಲ್ಲರೂ ಸಂಬಂಧಿಗಳು ಮತ್ತು ನಮ್ಮ ಭವಿಷ್ಯವು ಬೆಸೆದುಕೂಂಡಿದೆ ಎಂದು ಅವರು ನಂಬಿದ್ದರು. ಇಂದಿನ ಧ್ರುವೀಕರಣದ ಜಗತ್ತು ಮತ್ತು ಒಡೆದು ಆಳುವ ಸಿದ್ಧಾಂತಗಳು ಒಂದು ಸಮುದಾಯವನ್ನು ಮತ್ತೊಂದು ಸಮುದಾಯದ ವಿರುದ್ಧ ಎತ್ತಿಕಟ್ಟಲು ಪ್ರಯತ್ನಿಸುತ್ತಿವೆ. ಇದಕ್ಕೆ ಪ್ರತಿಯಾಗಿ, ಗಾಂಧೀಜಿಯವರ ಬ್ರಾತ್ವತ್ವದ ಸಂದೇಶವು ನಮ್ಮ ಶಕ್ತಿಯು ನಮ್ಮ ಏಕತೆಯಲ್ಲಿದೆ , ಪರಸ್ಪರ ಗೌರವ ಮತ್ತು ತಿಳುವಳಿಕೆಯ ಮೂಲಕ ವೈವಿಧ್ಯತೆಯನ್ನು ಅಳವಡಿಸಿಕೊಳ್ಳುವ ನಮ್ಮ ಸಾಮರ್ಥ್ಯದಲ್ಲಿದೆ ಎಂದು ಹೇಳುತ್ತದೆ.

ಆದಾಗ್ಯೂ, ಇಂದು ಪ್ರಪಂಚದಾದ್ಯಂತ ಕೋಮುವಾದವು ಉತ್ತುಂಗದಲ್ಲಿದೆ, ನಮ್ಮ ಸಮಾಜಗಳ ಮೂಲಕ್ಕೆ ಆತಂಕಕಾರಿಯಾಗಿದೆ . ಗಾಂಧೀಜಿಯವರ 21 ನೇ ಶತಮಾನದ ಅವತಾರವು ನಿಸ್ಸಂದೇಹವಾಗಿ ಇವುಗಳನ್ನು ಸರಿಪಡಿಸಲು ಪ್ರಯತ್ನಿಸುತ್ತದೆ. ಧರ್ಮ, ಜಾತಿ ಅಥವಾ ಪಂಥಗಳನ್ನು ಮೀರಿ ಎಲ್ಲರನ್ನೂ ಸಮಾನತೆ ಮತ್ತು ನ್ಯಾಯದೊಂದಿಗೆ ಪರಿಗಣಿಸುವ ಜಗತ್ತನ್ನು ಬಯಸುತ್ತದೆ . ಪ್ರತಿಯೊಬ್ಬ ವ್ಯಕ್ತಿಯನ್ನು ಮೌಲ್ಯಯುತವಾಗಿ ಗೌರವಿಸಿದಾಗ ಮಾತ್ರ ಶಾಂತಿಯನ್ನು ಸಾಧಿಸಬಹುದು ಎಂದು ಗಾಂಧೀಜಿಯವರು ನಮಗೆ ನೆನಪಿಸುತ್ತಾರೆ.

"ಸುಸ್ಥಿರ ಅಬಿವೃದ್ಧಿ" ಎಂಬ ಪದವು ಜಾಗತಿಕವಾಗಿ ಸುದ್ದಿಯಾಗುವ ಬಹಳ ಹಿಂದೆಯೇ, ಗಾಂಧೀಜಿಯವರು ಪ್ರಕೃತಿಯೊಂದಿಗೆ ಸಾಮರಸ್ಯದ ಜೀವನ ವಿಧಾನಕ್ಕಾಗಿ ಪ್ರತಿಪಾದಿಸಿದರು. ಅನಿಯಂತ್ರಿತ ಕೈಗಾರಿಕೀಕರಣದ ಅಪಾಯಗಳ ವಿರುದ್ದ ಅವರು ಎಚ್ಚರಿಕೆ ನೀಡಿದರು. ಇದು ಜನರು ಮತ್ತು ಪರಿಸರಕ್ಕೆ ತೊಂದರೆಯನ್ನುಂಟು ಮಾಡುತ್ತವೆ ಎಂದು ಅವರು ನಂಬಿದ್ದರು.

ಗಾಂಧೀಜಿಯವರ ಗ್ರಾಮ ಸ್ವರಾಜ್ ಪರಿಕಲ್ಪನೆಯು ಸ್ಥಳೀಯ ಸಮುದಾಯಗಳು ತಮ್ಮ ಪರಿಸರದೊಂದಿಗೆ ಹೇಗೆ ಸಾಮರಸ್ಯದಿಂದ ಬದುಕುತ್ತವೆ, ಹೇಗೆ ಸಂಪನ್ಮೂಲಗಳನ್ನು ವಿವೇಚನೆಯಿಂದ ಬಳಸುತ್ತವೆ ಮತ್ತು ಹೇಗೆ ಭವಿಷ್ಯದ ಅಗತ್ಯಗಳಿಗೆ ಧಕ್ಕೆಯಾಗದಂತೆ ನೋಡಿಕೊಳ್ಳುತ್ತವೆ ಎಂಬುದಾಗಿತ್ತು.

ಇಂದು ಹವಾಮಾನ ಬದಲಾವಣೆಯ ಆತಂಕವನ್ನು ಎದುರಿಸುತ್ತಿರುವಾಗ, ಗಾಂಧೀಜಿಯವರ ಸುಸ್ಥಿರತೆಯ ತತ್ವಗಳು ಇಂದಿಗೂ ಪ್ರಸ್ತುತವಾಗಿವೆ. ನಾವು ನಮ್ಮ ಅಭಿವೃದ್ಧಿಯ ಮಾದರಿಗಳನ್ನು ಮರುರೂಪಿಸಬೇಕಾಗಿದೆ . ಬೆಳವಣಿಗೆಯ ನಿರಂತರ ಅನ್ವೇಷಣೆಯಿಂದ ಕೊಂಚ ದೂರ ಸರಿಯುವುದು ಹಾಗೂ ಜನರು – ಗ್ರಹಗಳ ಯೋಗಕ್ಷೇಮಕ್ಕೆ ಆದ್ಯತೆ ನೀಡುವ ಮಾದರಿಯತ್ತ ನಾವು ಸಾಗಬೇಕಾಗಿದೆ. ನಮ್ಮ ಸರ್ಕಾರವು ರಾಜ್ಯದ ನೈಸರ್ಗಿಕ ಸಂಪನ್ಮೂಲಗಳನ್ನು ಗೌರವಿಸುವ ಮತ್ತು ನಮ್ಮ ಮಕ್ಕಳಿಗೆ ಉತ್ತಮ ಭವಿಷ್ಯವನ್ನು ಖಾತ್ರಿಪಡಿಸುವ, ಸಮಾನ ಮತ್ತು ಸುಸ್ಥಿರ ಅಭಿವೃದ್ಧಿಯ ಮಾರ್ಗವನ್ನು ಅನುಸರಿಸಲು ಬದ್ಧವಾಗಿದೆ.

ಕರ್ನಾಟಕದಲ್ಲಿ ಗಾಂಧೀಜಿಯವರ ಆದರ್ಶಗಳನ್ನು ಒಳಗೊಂಡಿರುವ ಸಮಾಜವನ್ನು ರಚಿಸುವ ನಿಟ್ಟಿನಲ್ಲಿ ನಾವು ಕೆಲಸ ಮಾಡುತ್ತೇವೆ. ಶಾಂತಿ ಮತ್ತು ಸೌಹಾರ್ದತೆಯನ್ನು ಬೆಳೆಸಲು, ಎಲ್ಲರಿಗೂ ನ್ಯಾಯವನ್ನು ಖಾತ್ರಿಪಡಿಸಲು, ಮಹಿಳೆಯರಿಗೆ ಭದ್ರತೆಯನ್ನು ಖಾತರಿಪಡಿಸಲು, ಭ್ರಾತೃತ್ವದ ಮನೋಭಾವವನ್ನು ನಿರ್ಮಿಸಲು ಮತ್ತು ಸುಸ್ಥಿರ ಅಭಿವೃದ್ಧಿಯನ್ನು ಉತ್ತೇಜಿಸಲು ನಾವು ಬದ್ಧರಾಗಿದ್ದೇವೆ. ನಾವು ಗಾಂಧೀಜಿಯವರ ಜೀವನ ಮತ್ತು ಕಾರ್ಯದಿಂದ ಸ್ಫೂರ್ತಿಯನ್ನು ಪಡೆಯೋಣ ಮತ್ತು ಗಾಂಧೀಜಿಯವರು ಹೆಮ್ಮೆಪಡುವಂತಹ ಸತ್ಯ, ಅಹಿಂಸೆ ಮತ್ತು ಸಹಾನುಭೂತಿಯ ಮೌಲ್ಯಗಳನ್ನು ಹೊಂದಿದ ಜಗತ್ತನ್ನು ನಿರ್ಮಿಸಲು ಶ್ರಮಿಸೋಣ.

ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಗೇ, ಸಮಾಜದಲ್ಲಿನ ಅಸಮಾನತೆ, ಅಸ್ಪೃಶ್ಯತೆ ಮೊದಲಾದ ಸಾಮಾಜಿಕ ಪಿಡುಗುಗಳ ವಿರುದ್ಧವೂ ಅವರ ಹೋರಾಟ ಸಾಗಿತ್ತು.

1924ರ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಚಾರಿತ್ರಿಕ ಬೆಳಗಾವಿ ಅಧಿವೇಶನ ನಡೆದು ನೂರು ವರ್ಷಗಳಾಗಿವೆ.

ಬೆಳಗಾವಿ ಅಧಿವೇಶನ ಮಹಾತ್ಮ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿವೇಶನದಲ್ಲಿ ಮಾಡಿದ ಅಧ್ಯಕ್ಷೀಯ ಬಾಷಣದಲ್ಲಿ ಧಾರ್ಮಿಕ ಸಾಮರಸ್ಯ ಮತ್ತು ವಿವಿಧ ಭಾಷೆಗಳನ್ನಾಡುವ ಜನರ ನಡುವಣ ಸೌಹಾರ್ದಯುತ ಸಂಬಂಧಕ್ಕೆ ಒತ್ತು ನೀಡಿ ಮಾತನಾಡಿದ್ದರು. ಸಮಾಜದ ದಮನಿತ ವರ್ಗಗಳ ಅಭ್ಯುದಯಕ್ಕೆ ಕೈಗೊಳ್ಳಬೇಕಿರುವ ಕ್ರಮಗಳ ಬಗ್ಗೆಯೂ ಪ್ರಸ್ತಾಪಿಸಿದ್ದರು .

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಬೆಳಗಾವಿ ಅಧಿವೇಶನದ ಶತಮಾನೋತ್ಸವನ್ನು ಸ್ಮರಣೀಯವಾಗಿ ಮತ್ತು ಅರ್ಥಪೂರ್ಣವಾಗಿ ಆಚರಿಸಲು ಈ ವರ್ಷ ಸರ್ಕಾರದ ವತಿಯಿಂದ ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಳ್ಳಲಾಗುವುದು . ದೇಶ ವಿದೇಶಗಳ ಗಣ್ಯರು, ಗಾಂಧೀಜಿವಾದಿಗಳು, ಚಿಂತಕರು ಎಲ್ಲರೂ ಒಟ್ಟಾಗಿ ಸೇರಿ ಚರ್ಚೆ ಹಾಗೂ ಸಂವಾದ ನಡೆಸಲು ಗಾಂಧೀಜಿ ಸ್ಮಾರಕ ನಿಧಿ ಉತ್ತಮ ವೇದಿಕೆಯನ್ನು ಕಲ್ಪಿಸಿಕೊಟ್ಟಿದೆ.

ಇಂತಹ ವಿಶಿಷ್ಟ ವಿಚಾರ ಸಂಕಿರಣವನ್ನು ಏರ್ಪಡಿಸಿರುವ ಗಾಂಧೀಜಿ ಸ್ಮಾರಕ ನಿಧಿಯ ಎಲ್ಲ ಪದಾಧಿಕಾರಿಗಳಿಗೂ ನನ್ನ ಅಭಿನಂದನೆಗಳು.

ಇಲ್ಲಿ ಮೂಡಿ ಬರುವ ಉತ್ತಮ ವಿಚಾರಗಳು ಎಲ್ಲರಿಗೂ ತಲುಪಲಿ. ವಿಶೇಷವಾಗಿ ವಿದ್ಯಾರ್ಥಿಗಳಿಗೆ ಗಾಂಧೀಜೀಯವರ ತತ್ವಗಳು ಅರ್ಥವಾಗಲಿ ಎಂದು ನಾನು ಆಶಿಸುತ್ತೇನೆ.

ನಮ್ಮೊಳಗಿನ ಗಾಂಧೀಜಿಯನ್ನು ಬೆಳಗಿಸುವ ಸಂದರ್ಭ ಇದಾಗಲಿ ಎಂದು ತಿಳಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಸಿದ್ದರಾಮಯ್ಯ**

ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ

■

# ಗಾಂಧಿ ಸ್ಮಾರಕ ನಿಧಿ ನಡೆದು ಬಂದ ಹಾದಿ ...

ಜನವರಿ 30. 1948. ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಹತ್ಯೆಯಾದ ದಿನ. ಅಹಿಂಸಾ ಮಾರ್ಗದ ಮೂಲಕ ಭಾರತಕ್ಕೆ ಸ್ವಾತಂತ್ರ್ಯ ಗಳಿಸಿ ಕೊಟ್ಟು ವಿಶ್ವ ಮಾನ್ಯರಾದ ಮಹಾತ್ಮ ಗಾಂಧೀಜಿಯವರ ಚಿಂತನೆ ಮತ್ತು ಆದರ್ಶಗಳನ್ನು ಮುಂದಿನ ಪೀಳಿಗೆಗೆ ಚಿರಸ್ಥಾಯಿಗೊಳಿಸಲು ದೇಶದ ಪ್ರಮುಖ ನೇತಾರರೆಲ್ಲರೂ ಸೇರಿ ಗಾಂಧೀಜಿಯವರ ಹೆಸರಿನಲ್ಲಿ ಒಂದು ನಿಧಿಯನ್ನು ಸ್ಥಾಪಿಸುವ ನಿರ್ಧಾರವನ್ನು ಕೈಗೊಂಡರು. ಇವರ ಆಶಯದಂತೆ 1948 ರಲ್ಲಿ ಗಾಂಧಿ ಸ್ಮಾರಕ ನಿಧಿ ಸ್ಥಾಪನೆಯಾಯಿತು.

ಭಾರತದ ಪ್ರಥಮ ರಾಷ್ಟ್ರಪತಿ ಡಾ . ಬಾಬು ರಾಜೇಂದ್ರ ಪ್ರಸಾದ್ ಅವರು ಗಾಂಧಿ ಸ್ಮಾರಕ ನಿಧಿ ಸಮಿತಿಯ ಅಧ್ಯಕ್ಷರಾದರು . ಪಂಡಿತ್ ಜವಾಹರ್ ಲಾಲ್ ನೆಹರು , ಸರ್ದಾರ್ ವಲ್ಲಭ ಬಾಯ್ ಪಟೇಲ್ , ಆಚಾರ್ಯ ಕೃಪಲಾನಿ, ಮೌಲಾನಾ ಅಬ್ದುಲ್ ಕಲಾಂ ಅಜಾದ್ , ಜೆ ಸಿ ಕುಮಾರಪ್ಪ , ಸಿ ರಾಜಗೋಪಾಲ ಚಾರಿ ,ರಾಜಕುಮಾರಿ ಅಮೃತ್ ಕೌರ್ , ಜಗಜೀವನ್ ರಾಮ್ , ದೇವದಾಸ್ ಗಾಂಧಿ ಇತ್ಯಾದಿ ಗಣ್ಯರು ಈ ಸಮಿತಿಯಲ್ಲಿದ್ದರು.

ಈ ಸಮಿತಿಯು ಉದಾತ್ತ ಧ್ಯೇಯಗಳನ್ನು ಹೊಂದಿ ಸ್ಥಾಪನೆಯಾಗಿದ್ದ ಗಾಂಧಿ ಸ್ಮಾರಕ ನಿಧಿಗೆ ದೇಣಿಗೆ ನೀಡುವಂತೆ ಭಾರತದ ಜನತೆಗೆ ಮನವಿ ಮಾಡಿಕೊಂಡರು. ದೇಶದ ಸಾಮಾನ್ಯ ಜನರು, ದಾನಿಗಳು, ಉದ್ಯಮಿಗಳು ಈ ನಿಧಿಗೆ ಧಾರಾಳ ಕೊಡುಗೆ ನೀಡಿದರು . ಒಟ್ಟು 10 ಕೋಟಿ 98 ಲಕ್ಷ 29 ಸಾವಿರ 106 ರೂಗಳು ಮತ್ತು 95 ಪೈಸೆ ಹಣ ಗಾಂಧಿ ಸ್ಮಾರಕ ನಿಧಿಗೆ ಸಂಗ್ರಹವಾಯಿತು . ಈ ಮೂಲ ನಿಧಿಯೊಡನೆ 1949 ರ ಫೆಬ್ರವರಿ ತಿಂಗಳಲ್ಲಿ ಒಟ್ಟು 24 ಮಂದಿ ಸದಸ್ಯರಿದ್ದ ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಡಾ . ಬಾಬು ರಾಜೇಂದ್ರ ಪ್ರಸಾದ್ ಅವರ ಅಧ್ಯಕ್ಷತೆಯಲ್ಲಿ ಅಧಿಕೃತವಾಗಿ ಸ್ಥಾಪನೆಯಾಯಿತು . ಟ್ರಸ್ಟಿನ ಸ್ಥಾಪಿತ ಸದಸ್ಯರುಗಳಲ್ಲಿ ದೇಶದ ಗಣ್ಯರು , ಉದ್ಯಮಿಗಳು , ಸ್ವಾತಂತ್ರ್ಯ ಹೋರಾಟಗಾರರಿದ್ದರು . ಕರ್ನಾಟಕದಿಂದ ಶ್ರೀಮತಿ ಯಶೋಧರ ದಾಸಪ್ಪ ಅವರು ಟ್ರಸ್ಟಿಯಾಗಿದ್ದರು.

ರಾಷ್ಟ್ರಮಟ್ಟದಲ್ಲಿ ಗಾಂಧಿ ಸ್ಮಾರಕ ನಿಧಿ ಆರಂಭವಾದ ಜೊತೆ ಜೊತೆಯಲ್ಲೇ ಎಲ್ಲ ಪ್ರಾಂತ್ಯ ಮತ್ತು ರಾಜ್ಯಗಳಲ್ಲಿ ಗಾಂಧಿ ಸ್ಮಾರಕ ನಿಧಿಗಳು ಆಯಾ ಪ್ರಾಂತ್ಯ ಮತ್ತು ರಾಜ್ಯಗಳ ಹೆಸರಿನಲ್ಲಿ ಆರಂಭವಾದವು. ಕರ್ನಾಟಕದಲ್ಲಿ ಕೂಡಾ 1948 ರಲ್ಲಿ ಬಾಂಬೆ ಪ್ರಾಂತ್ಯ ಮತ್ತು ಮೈಸೂರು ಪ್ರಾಂತ್ಯದಲ್ಲಿ ಗಾಂಧಿ ಸ್ಮಾರಕ ನಿಧಿ ಸ್ಥಾಪನೆಗೊಂಡವು . ಕರ್ನಾಟಕ ಏಕೀಕರಣದ ನಂತರ ಇವೆರಡೂ ಪ್ರಾಂತ್ಯಗಳು ಸೇರಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯಾಗಿ ಮುಂದುವರಿದವು .

**ಗಾಂಧಿ ಸ್ಮಾರಕ ನಿಧಿಯ ಉದ್ದೇಶಗಳು :**

ಮಹಾತ್ಮ ಗಾಂಧೀಜಿಯವರ ರಚನಾತ್ಮಕ ಚಟುವಟಿಕೆಗಳು ಮತ್ತು ಅದಕ್ಕೆ ಪೂರಕವಾದ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು ; ಗಾಂಧೀಜಿಯವರು ಸ್ಥಾಪಿಸಿದ್ದ ಆಶ್ರಮ , ಸಂಸ್ಥೆಗಳನ್ನು ನಡೆಸಿಕೊಂಡು ಹೋಗುವುದು ; ಗಾಂಧೀಜಿಯವರ ಜೀವನ ಮತ್ತು ವಿಚಾರಗಳನ್ನು ಬಿಂಬಿಸುವ ಮ್ಯೂಸಿಯಂಗಳ ಸ್ಥಾಪನೆ ಮತ್ತು ನಿರ್ವಹಣೆ ; ಗಾಂಧೀಜಿಯವರ ಬರಹಗಳ ಸಂಗ್ರಹಣೆ ಮತ್ತು ಸಂರಕ್ಷಣೆ ; ಗ್ರಾಮೀಣ ಪ್ರದೇಶದಲ್ಲಿ ಅರೋಗ್ಯ ಮತ್ತು ನೈರ್ಮಲ್ಯ ಸುಧಾರಣೆ ; ರಚನಾತ್ಮಕ ಚಟುವಟಿಕೆಗಳ ಬಗ್ಗೆ ಜನರಿಗೆ ತರಬೇತಿ , ನಯೀ ತಾಲೀಮ್ ಶಿಕ್ಷಣ ಪದ್ಧತಿ , ವಯಸ್ಕರ ಶಿಕ್ಷಣ ಇತ್ಯಾದಿ ಚಟುವಟಿಕೆಗಳನ್ನು ಯಾವುದೇ ಮತ , ಜಾತಿ , ಜನಾಂಗ , ಲಿಂಗ ತಾರತಮ್ಯವಿಲ್ಲದೆ ಹಮ್ಮಿಕೊಂಡು ಹೋಗುವುದು ಗಾಂಧಿ ಸ್ಮಾರಕ ನಿಧಿಯ ಪ್ರಮುಖ ಉದ್ದೇಶಗಳಾಗಿದ್ದವು .

ಗಾಂಧಿ ಸ್ಮಾರಕ ನಿಧಿಯ ಉದ್ದೇಶಿತ ಚಟುವಟಿಕೆಗಳನ್ನು ನಿರ್ವಹಿಸಲು ರಾಷ್ಟ್ರಮಟ್ಟದಲ್ಲಿ ಕೆಲವು ಸ್ವಾಯತ್ತ ಸಂಸ್ಥೆಗಳು ರಚನೆಯಾದವು . ದೆಹಲಿ , ಮದುರೈ , ಬಾಂಬೆ , ಬಾರಕ್ ಪುರ್ ,ಪಾಟ್ನಾದಲ್ಲಿ ಗಾಂಧಿ ಸ್ಮಾರಕ ಮ್ಯೂಸಿಯಂಗಳು ಸ್ಥಾಪಿತವಾದವು . ದೆಹಲಿಯಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ , ಪ್ರಕೃತಿ ಚಿಕಿತ್ಸಾಲಯ , ಗಾಂಧಿ ಸ್ಮಾರಕ ಸಂಗ್ರಹಾಲಯ



ಭಾರತದ ಪ್ರಥಮ ರಾಷ್ಟ್ರಪತಿ
ಡಾ . ಬಾಬು ರಾಜೇಂದ್ರ ಪ್ರಸಾದ್



ಭಾರತದ ಪ್ರಥಮ ಪ್ರಧಾನಿ
ಪಂಡಿತ್ ಜವಾಹರ್ ಲಾಲ್ ನೆಹರು



ಉಪಪ್ರಧಾನಿ ಸರ್ದಾರ್
ವಲ್ಲಭ ಬಾಯಿ ಪಟೇಲ್



ಯಶೋಧರ ದಾಸಪ್ಪ



**ಗಾಂಧಿ ಸ್ಮಾರಕ ನಿಧಿಯ ಅಧಿಕೃತ ಆಹ್ವಾನದ ಮೇರೆಗೆ ಮಾರ್ಟಿನ್ ಲೂಥರ್ ಕಿಂಗ್ ಜೂನಿಯರ್ ಅವರು 1959ರಲ್ಲಿ ಭಾರತ ಪ್ರವಾಸ**



**ವಿನೋಬಾ ಭಾವೆಯವರ ಭೂದಾನ ಆಂದೋಲನದ ಚಿತ್ರ**

ಆರಂಭಗೊಂಡವು . ಮಹಾರಾಷ್ಟ್ರದ ವಾರ್ಧಾದಲ್ಲಿ ಸೇವಾಗ್ರಾಮ ಪ್ರತಿಷ್ಠಾನ , ನಯೀ ತಾಲೀಮ್ ಶಿಕ್ಷಣ ಸಂಸ್ಥೆ , ಕಸ್ತೂರ್ ಬಾ ಅರೋಗ್ಯ ಸಹಕಾರ ಸಂಘ , ಮಗನ್ ಸಂಗ್ರಹಾಲಯ ಇವು ಸ್ಥಾಪನೆಯಾದವು . ಬಾಂಬೆಯಲ್ಲಿ ಗಾಂಧಿ ಸೇವಕ ಸಮಾಜ , ಪೂನಾದ ಆಘಾಖಾನ್ ಅರಮನೆಯಲ್ಲಿ ಗಾಂಧಿ ರಾಷ್ಟ್ರೀಯ ಸ್ಮಾರಕ ನಿರ್ಮಾಣವಾಯಿತು . ಮುಂಬೈನಲ್ಲಿ ಗಾಂಧಿ ಸಿನಿಮಾ ಸಮಿತಿ ರಚನೆಯಾಯಿತು .

**ಮದುರೈ ಗಾಂಧಿ ಮ್ಯೂಸಿಯಂ**

ಗಾಂಧಿ ಸ್ಮಾರಕ ನಿಧಿ ಸ್ಥಾಪನೆಯಾಗಿ ಈಗ ಎಪ್ಪತ್ತೈದು ವರ್ಷಗಳು ಸಂದಿವೆ . ಗಾಂಧೀಜಿಯವರ ಆಶಯಗಳನ್ನು ಈಡೇರಿಸುವಲ್ಲಿ ಹಾಗೂ ದೇಶಾದ್ಯಂತ ಇರುವ ಗಾಂಧಿ ಪ್ರಣೀತ ಸಂಘ ಸಂಸ್ಥೆಗಳಿಗೆ ಗಾಂಧಿ ಸ್ಮಾರಕ ನಿಧಿ ಮಾರ್ಗದರ್ಶಿ ಸಂಸ್ಥೆಯಾಗಿದೆ . ದೇಶಕ್ಕೆ ಸ್ವಾತಂತ್ರ್ಯ ಬಂದ ಹೊಸತರಲ್ಲಿ ಕೇಂದ್ರ ಸರ್ಕಾರದ ನೀತಿ ನಿರೂಪಣೆಯಲ್ಲಿ ಮತ್ತು ಕಾರ್ಯಕ್ರಮಗಳ ಜಾರಿಯಲ್ಲಿ ಗಾಂಧಿ ಸ್ಮಾರಕ ನಿಧಿ ನಿರ್ಣಾಯಕ ಪಾತ್ರ ವಹಿಸಿದೆ. ಗಾಂಧಿ ಪ್ರಣೀತ ಕಾರ್ಯಕ್ರಮಗಳಾದ ಖಾದಿ ಗ್ರಾಮೋದ್ಯೋಗ , ಗುಡಿ ಕೈಗಾರಿಕೆಗಳಿಗೆ ಉತ್ತೇಜನ , ವಯಸ್ಕರ ಶಿಕ್ಷಣ , ಕುಷ್ಠರೋಗ ನಿರ್ಮೂಲನೆ , ಗ್ರಾಮೀಣ ಅರೋಗ್ಯ , ಮಹಿಳಾ ಸಬಲೀಕರಣ , ಮತೀಯ ಸಾಮರಸ್ಯ , ಕಾರ್ಮಿಕ ಕಲ್ಯಾಣ , ದುರ್ಬಲವರ್ಗಗಳ ರಕ್ಷಣೆ , ಮಧ್ಯಪಾನ ನಿಷೇದ ಚಟುವಟಿಕೆಗಳನ್ನು ಸಂಯೋಜಿಸುವುದರಲ್ಲಿ ಗಾಂಧಿ ಸ್ಮಾರಕ ನಿಧಿಯ ಪಾತ್ರ ಪ್ರಮುಖವಾಗಿದೆ.

ಅಮೇರಿಕಾದ ಕಪ್ಪು ಜನರ ನಾಯಕ ಮಾರ್ಟಿನ್ ಲೂಥರ್ ಕಿಂಗ್ ಜೂನಿಯರ್ ಅವರ ಭಾರತ ಭೇಟಿಯಲ್ಲಿ ಗಾಂಧಿ ಸ್ಮಾರಕ ನಿಧಿಯದ್ದೇ ನಿರ್ಣಾಯಕ ಪಾತ್ರ. ಗಾಂಧಿ ಸ್ಮಾರಕ ನಿಧಿಯ ಅಧಿಕೃತ ಆಹ್ವಾನದ ಮೇರೆಗೆ ಮಾರ್ಟಿನ್ ಲೂಥರ್ ಕಿಂಗ್ ಜೂನಿಯರ್ ಅವರು 1959 ರಲ್ಲಿ ಭಾರತಕ್ಕೆ ಪತ್ನಿ ಸಮೇತ ಆಗಮಿಸಿ ಐದು ವಾರಗಳ ಕಾಲ ಪ್ರವಾಸ ಮಾಡಿದರು . ಭಾರತ ಸರ್ಕಾರವು ಅವರಿಗೆ ರಾಷ್ಟ್ರೀಯ ಅತಿಥಿಯ ಮಾದರಿಯಲ್ಲಿ ಎಲ್ಲ ಸೌಲಭ್ಯಗಳನ್ನು ನೀಡಿ ಗೌರವಿಸಿತು . ಈ ಭಾರತ ಪ್ರವಾಸದ ನಂತರ ಮಾರ್ಟಿನ್ ಲೂಥರ್ ಕಿಂಗ್ ಅವರು ಭಾರತೀಯ ಜನ ಸಂಸ್ಕೃತಿಯ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿದರು . ಅಷ್ಟೇ ಅಲ್ಲ ಜನಾಂಗೀಯ ತಾರತಮ್ಯದ ವಿರುದ್ಧ ಭಾರತ ದೇಶವು ತಮಗೆ ನೀಡಿದ ನೈತಿಕ ಬೆಂಬಲದ ಕುರಿತು ಅಮೇರಿಕಾದ ಜನತೆಯ ಮುಂದೆ ಅಭಿಮಾನ ವ್ಯಕ್ತಪಡಿಸಿದ್ದು ಈಗ ಇತಿಹಾಸ .

ಮಹಾನ್ ದೇಶಪ್ರೇಮಿಗಳು , ಸ್ವದೇಶೀ ಚಿಂತನೆಯ ಗಣ್ಯರುಗಳಿಂದ ಕೂಡಿದ್ದ ಗಾಂಧಿ ಸ್ಮಾರಕ ನಿಧಿಯ ಕಾರ್ಯ ಚಟುವಟಿಕೆಗಳು ಹೀಗೆಯೇ ಮುಂದುವರಿದವು . ಮಹಾತ್ಮ ಗಾಂಧೀಯವರ ನೆಚ್ಚಿನ ಅನುಯಾಯಿ ವಿನೋಬಾ ಭಾವೆಯವರು 1951ರಲ್ಲಿ ಆರಂಭಿಸಿ 1965 ರವರೆಗೆ 14 ವರ್ಷಗಳ ಕಾಲ ನಡೆಸಿದ ಭೂದಾನ ಚಳವಳಿಗೆ ಗಾಂಧಿ ಸ್ಮಾರಕ ನಿಧಿಯದ್ದೇ ಪ್ರೇರಕ ಶಕ್ತಿ . ಆರ್ಥಿಕ ,ಸಾಂಸ್ಥಿಕ ನೆರವು ನೀಡಿ ಸರ್ವೋದಯ ಕಾರ್ಯಕರ್ತರ ಸೇವೆಯನ್ನೂ ಒದಗಿಸಿ ಭೂದಾನ ಚಳವಳಿಯನ್ನು ಯಶಸ್ವಿಗೊಳಿಸಿದ ಶ್ರೇಯಸ್ಸು ಗಾಂಧಿ ಸ್ಮಾರಕ ನಿಧಿಗೆ ಸಲ್ಲುತ್ತದೆ. ಗ್ರಾಮೀಣ ಸೇವೆಗಾಗಿ ಗಾಂಧಿ ಘರ್ ಗಳ ಸ್ಥಾಪನೆ , ಭಾರತೀಯ ಭಾಷೆಗಳಲ್ಲಿ ಗಾಂಧಿ ಸಾಹಿತ್ಯ ರಚನೆಗೆ ನೆರವು , ಗಾಂಧೀಜಿಯವರಿಗೆ ಸಂಬಂದಿಸಿದ ಚಲನ ಚಿತ್ರಗಳು ಮತ್ತು ಗಾಂಧೀಜಿಯವರ ಪ್ರಾರ್ಥನಾ ಸಭೆಗಳ ಭಾಷಣ ಸಂಗ್ರಹ ಮತ್ತು ಒಟ್ಟಾರೆಯಾಗಿ ಗಾಂಧಿ ವಿಚಾರಗಳ ಪ್ರಚಾರದಲ್ಲಿ ಕೂಡಾ ಗಾಂಧಿ ಸ್ಮಾರಕ ನಿಧಿ ಮುಂಚೂಣಿಯಲ್ಲಿ ನಿಂತು ಸಾಧನೆ ಮಾಡಿದೆ.

ಮಹಾತ್ಮ ಗಾಂಧೀಜಿಯವರ ಜನ್ಮ ಶತಮಾನೋತ್ಸವವನ್ನು 1969 ರಲ್ಲಿ ದೇಶಾದ್ಯಂತ ಆಚರಿಸುವಲ್ಲಿ ಗಾಂಧಿ ಸ್ಮಾರಕ ನಿಧಿಯ ಕೊಡುಗೆ ಗಣನೀಯವಾಗಿದೆ. ಗಾಂಧೀಜಿಯವರ ರಚನಾತ್ಮಕ ಚಟುವಟಿಕೆಗಳನ್ನು ಆಧರಿಸಿ ರೂಪಿಸಿದ ಗಾಂಧೀಜಿ ಜನ್ಮ ಶತಮಾನೋತ್ಸವ ಕಾರ್ಯಕ್ರಮದಲ್ಲಿ ವಿನೋಬಾ ಭಾವೆಯವರಿಂದ ಸ್ಫೂರ್ತಿ ಪಡೆದ ಗ್ರಾಮದಾನ , ಖಾದಿ ಮತ್ತು ಶಾಂತಿ ಸೇನಾ ಕಾರ್ಯಕ್ರಮಗಳನ್ನು ವಿಶೇಷವಾಗಿ ಬಿಂಬಿಸಲಾಗಿತ್ತು . ಮತೀಯ ಸಾಮರಸ್ಯ ಮತ್ತು ರಾಷ್ಟ್ರೀಯ ಒಗ್ಗೂಡುವಿಕೆ , ಅಸ್ಪೃಶ್ಯತೆ ನಿವಾರಣೆ , ಮದ್ಯಪಾನ ನಿಷೇದ , ಅನಕ್ಷರತೆಯ ನಿರ್ಮೂಲನ , ಮನೆ ಮನೆಗೆ ಗಾಂಧಿ ಸಂದೇಶಗಳನ್ನು ತಲುಪಿಸುವುದು ಇವು ಮುಖ್ಯ ಕಾರ್ಯಕ್ರಮಗಳಾಗಿದ್ದವು. ಯುನೆಸ್ಕೋ ಸಂಸ್ಥೆಯು ತನ್ನ 122 ಸದಸ್ಯ ರಾಷ್ಟ್ರಗಳಲ್ಲಿ ಗಾಂಧಿ ಜನ್ಮ ಶತಮಾನೋತ್ಸವ ಆಚರಣೆ ಮಾಡುವಂತೆ ಕರೆ ನೀಡಿದ್ದರ ಹಿಂದೆ ಗಾಂಧಿ ಸ್ಮಾರಕ ನಿಧಿ ತನ್ನ ಪ್ರಭಾವವನ್ನು ಬೀರಿತ್ತು . ನಿಸ್ವಾರ್ಥ ಸೇವಾ ಮನೋಭಾವದ ಮಹನೀಯರು ಗಾಂಧಿ ಸ್ಮಾರಕ ನಿಧಿಯ ಚುಕ್ಕಾಣಿ ಹಿಡಿದಿದ್ದೇ ಇವೆಲ್ಲಕ್ಕೂ ಮುಖ್ಯ ಕಾರಣ .

ಇಂಥ ಭವ್ಯ ಹಿನ್ನೆಲೆಯ ಗಾಂಧಿ ಸ್ಮಾರಕ ನಿಧಿಗೆ ಈಗ 75 ವರ್ಷಗಳು ತುಂಬಿವೆ . ಹಿರಿಯ ತಲೆಮಾರಿನ ಗಾಂಧಿ ಅನುಯಾಯಿಗಳು ಕ್ರಮೇಣ ಕಣ್ಮರೆಯಾಗಿದ್ದಾರೆ. ಈಗ ಯುವ ತಲೆಮಾರಿನವರನ್ನು ಸೇರಿಸಿಕೊಂಡು ತನ್ನ ಕಾರ್ಯ ಕ್ಷೇತ್ರವನ್ನು ಮರು ರೂಪಿಸಿಕೊಳ್ಳುವ ಸವಾಲು ಗಾಂಧಿ ಸ್ಮಾರಕ ನಿಧಿಯ ಮುಂದಿದೆ.

**ವಿಶುಕುಮಾರ್ ಎನ್ ಆರ್**
ಕಾರ್ಯಾಧ್ಯಕ್ಷರು , ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಗಾಂಧಿ ಮತ್ತು ಕರ್ನಾಟಕ

ಭಾಗ – 16

ಗಾಂಧಿ ಮತ್ತು ಕರ್ನಾಟಕದ ನಡುವೆ ಒಂದು ಮಧುರ ಸಂಬಂಧವಿದೆ. ಕರ್ನಾಟಕದ ಜೊತೆಗಿನ ಗಾಂಧೀಜಿಯವರ ಒಡನಾಟ ಮತ್ತು ಸಂಬಂಧವನ್ನು ಇತ್ತೀಚಿನ ಪೀಳಿಗೆಯ ಓದುಗರಿಗೆ ತಲುಪಿಸುವ ಉದ್ದೇಶ ನಮ್ಮದು. ಅದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಪ್ರಕಟಣೆಯಾದ **"ಗಾಂಧಿ ಮತ್ತು ಕರ್ನಾಟಕ"** ಕೃತಿಯನ್ನು ಸರಣಿ ಮಾದರಿಯಲ್ಲಿ ಪ್ರತಿ ತಿಂಗಳು ಬಾಪು ಪ್ರಪಂಚ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.

ಭಾರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು,ಅದರಲ್ಲಿಯೂ ವಿದುರಾಶ್ವಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ 1982ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೆ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿವೆ . ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ಕರ್ನಾಟಕದ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲಿ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ 1915ರಿಂದ 1937ರ ಅವಧಿಯಲ್ಲಿ 19 ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೇ ಸ್ವತಃ ತಮ್ಮ ' ಹರಿಜನ ' ಮತ್ತು ' ಯಂಗ್ ಇಂಡಿಯಾ ' ಪತ್ರಿಕೆಗಳಲ್ಲಿ 1924, 1927, 1936, ಹಾಗೂ 1937ರ ಅವಧಿಯಲ್ಲಿ ಪ್ರಕಟಿಸಿದ್ದಾರೆ.

ಈ ಸಮಗ್ರ ದಾಖಲೆಗಳು ' ಗಾಂಧೀ ಮತ್ತು ಕರ್ನಾಟಕ ' ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾಚಿತ್ರಗಳು ಸಹ ದಾಖಲಾಗಿವೆ. ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಕೂಡಾ ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನೂ ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ 44 ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿಯಲ್ಲಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ ಮೂಡಿಸುತ್ತವೆ.



(ಹಿಂದಿನ ಸಂಚಿಕೆಯಿಂದ)

**ನಂದಿಬೆಟ್ಟದಲ್ಲಿ ಗಾಂಧೀಜಿ (1927)**

1927ರಲ್ಲಿ ಗಾಂಧೀಜಿ ಕರ್ನಾಟಕದಲ್ಲಿ ಸುಮಾರು 4 ತಿಂಗಳ ಕಾಲ ಇದ್ದರು. ಅವರ ಆರೋಗ್ಯ ಬಹಳ ಕೆಟ್ಟಿತ್ತು. ರಕ್ತದ ಒತ್ತಡ ಹೆಚ್ಚಾಗಿತ್ತು. ವಿಶ್ರಾಂತಿ ಬೇಕು ಎಂಬುದು ವೈದ್ಯರ ಅಭಿಪ್ರಾಯವಾಗಿತ್ತು. ಮೈಸೂರು ಸರ್ಕಾರ ಆಗಿನ ವಾತಾವರಣದಲ್ಲಿ ಧೈರ್ಯ ಮಾಡಿ, ಅವರಿಗೆ ನ0ದಿದುರ್ಗದಲ್ಲಿ ವಿಶ್ರಾಂತಿ ಕೊಡಲು ನಿರ್ಧರಿಸಿ, ಆಹ್ವಾನಿಸಿತು. ಆಗ ಅವರು ಬೆ0ಗಳೂರಿನ ಬಳಿ ಇರುವ ನಂದಿಬೆಟ್ಟಕ್ಕೆ ಬಂದು ಕೆಲವು ಕಾಲ ಇದ್ದರು. ಸ್ವಲ್ಪ ಗುಣ ಆದ ಮೇಲೆ ಬೆಂಗಳೂರಿಗೆ ಬಂದು ಅಲ್ಲಿಂದ ತಮ್ಮ ಕರ್ನಾಟಕ ಪ್ರವಾಸವನ್ನು ಮುಂದುವರೆಸಿದರು.

ಆ ಸಂದರ್ಭದಲ್ಲಿ ಅವರ ಜೊತೆ ಮಹದೇವ ದೇಸಾಯಿ ಇದ್ದರು. ವಾರವಾರವೂ ಅವರು "ಯಂಗ್ ಇಂಡಿಯಾ' ಎಂಬ ಪತ್ರಿಕೆಯಲ್ಲಿ, ''weekly letter' (ಸಾಪ್ತಾಹಿಕ ಪತ್ರ) ಎಂಬ ಶೀರ್ಷಿಕೆಯಲ್ಲಿ ಗಾಂಧೀಜಿಯ ಚಲನವಲನಗಳನ್ನು ವಿವರಿಸುತ್ತ ಇದ್ದರು. ಅವರ ಆ ಟಿಪ್ಪಣಿಗಳನ್ನು ಇದ್ದಕ್ಕಿದ್ದ ಹಾಗೆಯೇ ಇಲ್ಲಿ ಎತ್ತಿಕೊಳ್ಳಲಾಗಿದೆ.

**ಗಾಂಧೀಜಿಯ ಅನಾರೋಗ್ಯ :**

ಹರಿದ್ವಾರವನ್ನು ಬಿಟ್ಟು ನಾವು ಕರ್ನಾಟಕದ ಪ್ರವಾಸಕ್ಕೆ ಹೊರಟಾಗ, ಎರಡು ಮೂರು ದಿನಗಳಲ್ಲಿ, ಏಕಾಏಕಿ ಗಾಂಧೀಜಿ ಬೇನೆ ಬಿದ್ದ ದುಃಖದ ಸುದ್ದಿಯನ್ನು ಎಲ್ಲರಿಗೂ ತಿಳಿಸುತ್ತ ಎಲ್ಲ ಕಾರ್ಯಕ್ರಮಗಳನ್ನು ರದ್ದುಮಾಡಿದ ಸುದ್ದಿ ತಿಳಿಸುತ್ತೇನೆ ಎಂದು ನನಗೆ ಕನಸು ಮನಸಿನಲ್ಲಿಯೂ ಇರಲಿಲ್ಲ. ಮಹಾರಾಷ್ಟದ ಪ್ರವಾಸ ಬಹಳ ಆಯಾಸಕರ ಆಗಿತ್ತು. ಅದರೂ ಗಾಂಧೀಜಿಗೆ ಐದು ಪೌಂಡು ತೂಕ ಹೆಚ್ಚು ಬಂದಿತ್ತು. ನಮಗೆಲ್ಲರಿಗೂ ಭ್ರಾಂತಿ. ಇಷ್ಟು ಆಯಾಸ ಆದರೂ ಅವರಿಗೆ ಆರೋಗ್ಯ ಅನುಕೂಲ ಆಯಿತು ಎಂದುಕೊಂಡೆವು.

ಆಮೇಲಿನ ಸಂಗತಿಗಳು– ಈ ಪ್ರಗತಿ ಕೇವಲ ಮಿಥ್ಯೆ, ನಿಜವಾಗಿ ಅವರಿಗೆ ಆರೋಗ್ಯ ಕೆಟ್ಟಿತ್ತು ಎಂಬುದು ಅರ್ಥ ಆಯಿತು. ದಾರಿಯಲ್ಲೆ ಅಕಸ್ಮಾತ್ ತಲೆ ತಿರುಗಿದಂತೆ ಆಯಿತು. ದೇಹದ ಎಡಮಗ್ಗಲು ಭಾರವಾಗಿ ಚೇತನಾ ರಹಿತವಾಯಿತು. ನಾವು ಏನೇನೋ ಯೋಚಿಸಿದೆವು. ಪೂನಾದಲ್ಲಿ ಅವರನ್ನು ರೈಲಿಗೆ ಹೊತ್ತು ತರಬೇಕಾಯಿತು. ದೃಷ್ಟಿ ಮ0ಜು ಆಗಿ ಹೇಗೆ ಹೇಗೋ ಒಂದೆರಡು ಸಾಲು ಬರೆದರು. ಅದೂ ಬಹಳ ಪ್ರಯಾಸಪಟ್ಟು ಸ್ವಲ್ಪ ನಿದ್ದೆ ಮಾಡಿ ಎದ್ದ ಮೇಲೆ ಆರೋಗ್ಯ ಮರಳಿದಂತೆ ಕಂಡಿತು. ಕರ್ನಾಟಕ ಕಾರ್ಯಕ್ರಮದಲ್ಲಿ ನಿಪ್ಪಾಣಿ ಮೊದಲನೆಯ ಸ್ಥಳ. 1927 ಮಾರ್ಚ್ ಕೊನೆಯ ವಾರ. ಅಲ್ಲಿಗೆ ಬಂದಾಗ ಆರೋಗ್ಯ ಬಹಳ ಕೆಟ್ಟು ಹೋಗಿತ್ತು ಡಾಕ್ಟರನ್ನು ಕರೆಸಿದೆವು. ಅಪೊಪ್ಲೆಕ್ಸ (ಲಕ್ವಾಗೆ ಸಂಬಂಧಿಸಿದ ಜಾಡ್ಯ) ಆಗಿತ್ತು. ದೈವವಶಾತ್ ಅದರ ಹೊಡೆತ ತಪ್ಪಿತ್ತು. ಇದೆಲ್ಲವೂ ಅತಿ ಪರಿಶ್ರಮಗಳ ಫಲ. ಎಲ್ಲ ಕಾರ್ಯಕ್ರಮಗಳನ್ನೂ ನಿಲ್ಲಿಸಿ ಸಂಪೂರ್ಣ ವಿಶ್ರಾಂತಿ ಪಡೆಯಬೇಕು ಎಂದು ಡಾಕ್ಟರು ಹೇಳಿದರು.

**ಡಾ. ಜೀವರಾಜ್ ಮೆಹ್ತಾ:**

"ಪೂನಾದಿಂದ ಇಲ್ಲಿಯವರೆಗೂ ಮೋಟಾರಿನಲ್ಲಿ ಬಂದರು, ಡಾ ಜೀವರಾಜ್ ಮೆಹ್ತಾ ಗಾಂಧೀಜಿಯನ್ನು ಪರೀಕ್ಷಿಸಿದರು. ಕಟ್ಟಕಡೆಗೂ ಗಾಂಧೀಜಿ ವೈದ್ಯರ ಸಲಹೆಯನ್ನು ಒಪ್ಪಿ ಎರಡು ತಿಂಗಳು ವಿಶ್ರಾಂತಿ ಪಡೆಯಲು ಒಪ್ಪಿದರು. ಶೀಘ್ರವಾಗಿ ಗುಣವಾಗುತ್ತಾ ಇದೆ ಗಾ0ಧೀಜಿಗೆ. ನಂದಿಬೆಟ್ಟದ ಒಳ್ಳೆಯ ಹವಾಗುಣ, ಶಾಂತ ವಾತಾವರಣಗಳಿಂದ ಗಾಂಧೀಜಿಯ ಆರೋಗ್ಯವರ್ಧನಕ್ಕೆ ಬಹಳ ಅನುಕೂಲವಾಗಿದೆ. ಅವರು ಪಡೆಯುತ್ತಿರುವ ವಿಶ್ರಾಂತಿಗೆ ನಂದಿಬೆಟ್ಟದ ಹವಾಗುಣವು ಪೋಷಕವಾಗಿಯೇ ಇದೆ.

ಆದರೆ ದಕ್ಷಿಣದಲ್ಲಿಯೇ ಏಕೆ ವಿಶ್ರಾಂತಿ ಪಡೆಯಬೇಕು? ಸಾವಂತವಾಡಿಯ ಅಂಬೋಲಿ ಗಿರಿಧಾಮದಲ್ಲಿ ಕೆಲವು ದಿನ ವಿಶ್ರಾಂತಿ ಪಡೆದರು. ಅಲ್ಲಿ ಹೆಚ್ಚು ಕಾಲ ಇರುವುದು ಅವರಿಗೆ ಇಷ್ಟವಿರಲಿಲ್ಲ. ಆಶ್ರಮಕ್ಕೆ ಹೋಗೋಣ ಎಂದರು. ಬಿಸಿಲು ಹೆಚ್ಚು ಅಲ್ಲಿ ಎಂದರೆ "ನಮ್ಮ ಜನ ಇಂಥ ಉರಿಬಿಸಿಲಿನಲ್ಲಿಯೇ ಕೆಲಸ ಮಾಡುತ್ತಾರಲ್ಲ. ಅವರಿಗೆ ಖಾಯಿಲೆ ಆದರೆ ಎಲ್ಲಿ ಹೋಗುತ್ತಾರೆ?" ಎಂದು ಕೇಳಿದರು. "ಹಾಗೆ ಸುಮ್ಮನೆ ಇರುವುದಾದರೆ ನಮ್ಮ ಆಶ್ರಮದಲ್ಲಿಯೇ ಇರುತ್ತೇನೆ" ಎಂದರು.

ಕಟ್ಟಕಡೆಗೆ ಗಿರಿಧಾಮಕ್ಕೆ ಆರೋಗ್ಯಧಾಮಕ್ಕೆ ಹೋಗಲು ಒಪ್ಪಿಕೊಂಡಾಗ, ಗುಣವಾದ ಮೇಲೆ ಮತ್ತೆ ನನ್ನ ಪ್ರವಾಸವನ್ನು ಹರಟುವ ಎಂದು ಕರಾರು ಹಾಕಿದರು. ಡಾ. ಜೀವರಾಜ ಮೆಹ್ತಾ ಹೇಳಿದರು "ನಿಮಗೆ ಸದಾ ಕೆಲಸ ಇದ್ದೇ ಇರುತ್ತೆ. ನಿಮ್ಮ ದಿನಚರಿಗೆ ಅಡ್ಡ ಬರುವುದಿಲ್ಲ ನಾನು, ಆದರೆ ನಿಮಗೆ ಆಗುತ್ತಿದ್ದ ಆಯಾಸ ಹೆಚ್ಚಿನದು. ಸ್ವಲ್ಪ ಗುಣ ಅದ ಮೇಲೆ, ಜನರು ಬಂದು ನೋಡಲಿ ನಿಮ್ಮನ್ನು. ತಾವು ಸಂಗ್ರಹಿಸಿದ ನಿಧಿಯನ್ನು ಕೊಡಲಿ. ಕೆಲಸಗಾರರು ವರದಿ ಹೇಳಲಿ. ನಿಮ್ಮಿಂದ ಸಲಹೆ ಪಡೆಯಲಿ. ನೀವು ಸ್ವತಃ ಕೆಲಸ ಮಾಡದೆ ಬರೀ ಮಾರ್ಗದರ್ಶನ ಮಾಡಿದರೆ ಸಾಕು. ಹಗುರವಾಗಿ ಏನಾದರೂ ಓದಿ. ಆತ್ಮಕಥೆ ಬರೆಯಿರಿ. ಪತ್ರವ್ಯವಹಾರವನ್ನು ಮಾತ್ರ ಮಾಡಬೇಡಿ.

"ಬಹಳ ಸಂತೋಷ. ಹಗುರವಾದ ಓದು ಎಂದರೆ ಏನು? ಶ್ರಮ ಇಲ್ಲದ ಓದು ಅಲ್ಲವೆ? ಡಾಕ್ಟರಿಗೆ ಹಗುರವಾದ ಓದು ಎಂದರೆ ಯಾವುದೋ ಒಂದು ವಿನೋದದ ಪುಸ್ತಕ ಆಗಬಹುದು. ಆದರೆ ಗಾಂಧೀಜಿಗೆ ಆಸನ–ಪ್ರಾಣಾಯಮಾದ ಪುಸ್ತಕವೋ ಸಾಧ್ಯವಾದರೆ ಜೈನ ಸಿದ್ಧಾಂತದ ಪುಸ್ತಕವೋ ಆದೀತು. ಒಂದು ರೀತಿಯಲ್ಲಿ ಈ ಖಾಯಿಲೆ ಅವರಿಗೆ ಒಂದು ವರದಂತೆ ಆಗಿದೆ. ಇಲ್ಲದೆ ಇದ್ದರೆ ಅವರಿಗೆ ಈ ಪುಸ್ತಕಗಳನ್ನು ಓದಲು ಬಿಡುವು ಎಲ್ಲಿದೆ? ಅವರು ಓದಿದ್ದೆಲ್ಲ ಹೆಚ್ಚಾಗಿ ಸೆರೆಮನೆಯಲ್ಲಿ ಇದ್ದಾಗ ಅಥವಾ ಆರೋಗ್ಯ ಸಂವರ್ಧನೆಗಾಗಿ ವಿಶ್ರಾಂತಿ ಪಡೆದಾಗ.

**ನೂಲದೆ ನಾನು ಬದುಕಲಾರೆ:**

ಡಾಕ್ಟರೊಂದಿಗೆ ಬಹಳ ದೀರ್ಘಕಾಲ ಮಾತುಕತೆ ಆಯಿತು. ಅದರ ಪರಿಣಾಮ ಆಗಿ ಈ ಕೆಳಗಿನ ಸಂಗತಿಗಳನ್ನು ಬರೆದಿದ್ದೇನೆ. ಎಷ್ಟೋ ಸಲ ಡಾಕ್ಟರರು ಗಾಂಧೀಜಿಯನ್ನು ಒಪ್ಪಿಸಿದ್ದಾರೆ ದೈವವಶಾತ್ . ಎಷ್ಟೋ ಸಲ ಒಪ್ಪಿಸಲು ಆಗಿಲ್ಲ. ಗಾಂಧೀಜಿ ಒಳ್ಳೆಯ ಆದರ್ಶ ರೋಗಿ ಎಂದು ಅನೇಕ ಡಾಕ್ಟರರು ಹೇಳಿದ್ದಾರೆ. ಆದರೂ ಕೆಲವು ವೇಳೆ ಅವರಿಗೆ ದಿಕ್ಕುತೋಚದ ಹಾಗೆ ಮಾಡಿಬಿಡುತ್ತಾರೆ. ಆರೋಗ್ಯ ಕೆಟ್ಟ ಕೂಡಲೆ ಸಂಪೂರ್ಣ ದೈಹಿಕ ವಿಶ್ರಾಂತಿ ಎಂದು ಡಾಕ್ಟರ್ ವಿಧಿಸಿದರು. ನೂಲುವುದೂ ಕೂಡದು ಎಂದರು. ಹಾಗಾದರೆ ನೂಲುವುದಕ್ಕೆ ಮೊದಲು,ನೂತ ಮೇಲೆ ನನ್ನ ರಕ್ತದ ಒತ್ತಡವನ್ನು ತೆಗೆದುಕೊಳ್ಳಿ, ಆ ಮೇಲೆ ನನಗೆ ತೋರಿಸಿ; ನೂಲುವುದರಿಂದ ನನ್ನ ರಕ್ತದ ಒತ್ತಡ ಹೆಚ್ಚು ಆಯಿತು ಎಂದರೆ ಅದರಿಂದ ಭಯ ಇದೆ ಎಂದು. ಆ ಮೇಲೆ ನಿಮ್ಮ ಸಲಹೆ ಕೇಳುತ್ತೇನೆ. ಆದರೆ ಇಲ್ಲಿ ನೋಡಿ, ನೂಲುವುದು ನನಗೆ



ವಿಶ್ರಾಂತಿಯೆ; ನನ್ನ ನರಗಳಿಗೆ ಅದರಿಂದ ಶಾಂತಿ ಸಿಗುತ್ತದೆ. ಅಲ್ಲದೆ ನನ್ನ ಜೀವನಕ್ರಮವೇ ಬೇರೆ. ನಿಮ್ಮ ಜೀವನ ಕ್ರಮವೇ ಬೇರೆ. ಉದಾಹರಣೆಗೆ–ನೀವು ಏನೇನೋ ಔಷಧಿಗಳನ್ನು ವಿಧಿಸುತ್ತೀರಿ. ನೋಡಿ ನನ್ನ ಜೀವನ ಒಂದು ಕ್ರಮವನ್ನು ಅನುಸರಿಸುತ್ತಿದೆ. ನಾನು ಅದನ್ನು ಸುಲಭವಾಗಿ ಬದಲಾಯಿಸಲಾರೆ. ಐದು ದ್ರವ್ಯಗಳಿರುವ ಒಂದು ಔಷಧವನ್ನು ನೀವು ಕೊಟ್ಟರೆ ನಾನು ತೆಗೆದುಕೊಂಡರೂ ತೆಗೆದುಕೊಂಡೇನು; ಆದರೆ ಅವತ್ತು ಊಟ ಬಿಡುತ್ತೇನೆ. ಏಕೆಂದರೆ ಏನೇ ಆಗಲಿ, ದಿನಕ್ಕೆ ಐದು ಪದಾರ್ಥಗಳಿಗಿಂತ ಹೆಚ್ಚು ನಾನು ತಿನ್ನುವುದಿಲ್ಲ ಎಂಬ ವ್ರತ ಇದೆ. ನನಗೆ ಗುಣ ಆಗಬೇಕಾದರೆ ಅಗತ್ಯ ಈ ಔಷಧ ಎಂದು ನನಗೆ ಮನದಟ್ಟು ಮಾಡಬೇಕು. ಇಲ್ಲದೆ ಇದ್ದರೆ ಔಷಧವನ್ನೇ ಕೊಡದೆ ಇರಬೇಕು.

ಇನ್ನೂ ಒಂದು ಮಾತು.ನೂಲದೆ ನಾನು ಬದುಕಲಾರೆ. ನಾನು ಊಟ ಮಾಡಬೇಕು ಬದುಕಬೇಕು ಎಂದರೆ ನೂಲಲೇ ಬೇಕು. ಒಂದು ವೇಳೆ ನೂಲುತ್ತ ನೂಲುತ್ತ ಹಾಗೆಯೆ ನಾನು ಕುಸಿದು ಬೀಳುವುದಾದರೆ, ಆಗ ನೀವು ಬಂದು ನೋಡಿದರೆ ಆ ಸಾವು ಎಂಥ ಸಾವು! ನನ್ನ ಸುತ್ತಲೂ ಇದ್ದವರು ನಿಮ್ಮ ನಿಯಮಗಳನ್ನು ಪಾಲಿಸಲಿಲ್ಲ ಎಂದು ಮನಸಾರೆ ನೀವು ಅವರನ್ನು ಬಯ್ಯಬಹುದು. ಆದರೆ ನೀವು ಒಳ್ಳೆಯವರಾದರೆ ಎಂಥ ಅದ್ಭುತ ಮರಣ ಎಂದೀರಿ. ನಾನು ಬದುಕಿ ಇದ್ದೂ ನೂಲದೇ ಹೋದರೆ ಬಹಳ ವ್ಯಥೆಗೊಂಡೆನು. ನನ್ನ ಅಂತರಂಗಕ್ಕೆ ಬಹಳ ಘಾಸಿ ಆದೀತು. ಹೌದು ವೈದ್ಯರೆ ನಾನು ಓದುವುದನ್ನು ಬರೆಯುವುದನ್ನು, ನೂಲುವುದನ್ನು ಕೂಡ ಬಿಟ್ಟೇನು; ಊಟವನ್ನು ಬಿಟ್ಟುಬಿಟ್ಟರೆ ಇದಕ್ಕೆ ನಿಮ್ಮ ಒಪ್ಪಿಗೆ ಇದೆಯೆ?

"ಇಲ್ಲ ಡಾಕ್ಟರೆ ನಿಮ್ಮ ಅಪ್ಪಣೆಯನ್ನು ಅಕ್ಷರಃ ಪಾಲಿಸಲಾರೆ ನಾನು. ನೀವು ದೋಷಾತೀತರಾದರೆ ಆ ಮಾತು ಬೇರೆ". ಡಾಕ್ಟರು ಹೇಳಿದರು "ಹಾಗೆ ಮಾಡಬಲ್ಲವರಾದರೆ ನಾವು ಔಷಧಿ ಕೊಡುತ್ತ ಇರಬೇಕಾದ್ದಿಲ್ಲ. ಭವಿಷ್ಯ ಹೇಳುತ್ತ ಗುಡಿಗಳಲ್ಲಿ ಕುಳಿತಿರಬಹುದು" ಹೀಗಾಗಿ "ಇವರಿಗೆ ಔಷಧಿ ಏನೂ ಬೇಡ, ಅನಿರ್ದಿಷ್ಟ ಕಾಲದವರೆಗೆ (14–4–27) ವಿಶ್ರಾಂತಿ ಸಾಕು" ಎಂದು ಡಾಕ್ಟರು ಹೇಳಿದರು.

ನಿಪ್ಪಾಣಿಯಲ್ಲಿ ಶ್ರೀ ರಾಜಗೋಪಾಲಚಾರಿ ಹೇಳಿದರು "ಭಗವಂತ ನಮ್ಮ ಶ್ರದ್ದೆಯನ್ನು ಪರೀಕ್ಷಿಸಬೇಕೆಂದ. ಗಾಂಧೀಜಿಯೆ ನಮ್ಮ ಮನೆ ಬಾಗಿಲಿಗೆ ಬಂದು ಬೇಡುವವರೆಗೆ ನಮ್ಮ ಕಾಣಿಕೆ ಕೊಡುತ್ತೇವೋ ಇಲ್ಲವೋ– ನಿಪ್ಪಾಣಿ ಈ ಪರೀಕ್ಷೆಯಲ್ಲಿ ತೇರ್ಗಡೆ ಆಯಿತು, ಅಲ್ಲಿ ನಾಲ್ಕು ದಿನ ಇರಬೇಕಾಯಿತು ನಾವು. ಆ ಕಾಲದಲ್ಲಿ ಅಲ್ಲಿನ ಜನ ನಡೆದುಕೊಂಡ ರೀತಿ ಅನುಕರಣ ಯೋಗ್ಯ ಆಗಿತ್ತು. ಘೋಷಣೆ ಇಲ್ಲ, ಸದ್ದು ಇಲ್ಲ, ಯಾವ ಒತ್ತಾಯವೂ ಇಲ್ಲ. ದರ್ಶನ ಅಥವಾ ವ್ಯರ್ಥ ಕುತೂಹಲ ಯಾವುದೂ ಇಲ್ಲ. ಇದ್ದಕ್ಕಿದ್ದಂತೆ ಗಾಂಧೀಜಿಯ ಆರೋಗ್ಯ ಕೆಟ್ಟಿತು ಎಂಬುದು ಎಲ್ಲರಿಗೂ ತಿಳಿಯಿತು. ಗಾಂಧೀಜಿ ತಂಗಿದ್ದ ಮನೆಯ ಹೊರಬಾಗಿಲ ಬಳಿಗೆ ಪ್ರತಿಯೊಬ್ಬರೂ ಬರುತ್ತಿದ್ದರು ಸದ್ದಿಲ್ಲದೆ. ದಿನವೂ ಗಾಂಧೀಜಿಯ ಆರೋಗ್ಯದ ಬಗ್ಗೆ ಒಂದು ಸಮಾಚಾರ ಪತ್ರವನ್ನು ಗೋಡೆಗೆ ಅಂಟಿಸುತ್ತಿದ್ದೆವು. ಅದನ್ನು ಓದಿಕೊಳ್ಳುತ್ತಿದ್ದರು.

ನಿಪ್ಪಾಣಿಯಿಂದ ಹೊರಟುಹೋಗುವ ದಿನ ನಮ್ಮ ಅತಿಥೇಯರು, ಒಂದು ನಿಮಿಷ ಕೈಸಾಲೆಯಲ್ಲಿ ಮೇಲುಗಡೆ ಗಾಂಧೀಜಿ ಕುಳಿತುಕೊಳ್ಳಲಿ, ಕಾರಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಹೆ0ಗಸರು ಅಂಗಳದಿಂದ ಅವರ ದರ್ಶನ ಮಾಡಿಕೊಳ್ಳಲಿ, ಕೆಲಸಗಾರರ ಪ್ರತಿನಿಧಿಗಳು ಇಬ್ಬರು ಮೇಲೆ ಹೋಗಿ ನಿಧಿಯನ್ನು ಅರ್ಪಿಸಲಿ–ಎಂದು ಏರ್ಪಾಟು ಮಾಡಿದರು.

**ನಿಪ್ಪಾಣಿಯಲ್ಲಿ :**

ಎಲ್ಲವೂ ನಿಶ್ಶಬ್ದ ಆಗಿ ನಡೆಯಿತು. ಶ್ರೀಮತಿ ಕಸ್ತೂರಬಾ ಗಾಂಧೀ ಹೆಂಗಸರ ನಡುವೆ ಕುಳಿತು ಒಂದೆರಡು ಮಾತು ಹೇಳಿದರು. ಮಾರನೆಯ ದಿನ ಬೆಳಿಗ್ಗೆ ನಾವು ಬೆಳಗಾಂವಿಗೆ ಹೋಗಬೇಕಾಗಿತ್ತು. ನಮಗೆ ಆತಿಥ್ಯ ನೀಡಿದ ಶ್ರೀ ಮೂಲಜೀ ಸುಮ್ಮನೆ ಸಭಾ ಸ್ಥಳಕ್ಕೆ ಹೋಗಿ, ಅಲ್ಲಿ ಒಂದೆರಡು ನಿಮಿಷ ಸುಮ್ಮನೆ ಕುಳಿತು ಗಾಂಧೀಜಿ ನಿಧಿಯನ್ನು ಸ್ವೀಕರಿಸಬೇಕು. ಉಳಿದ ಕಾರ್ಯಕ್ರಮ ಎಲ್ಲವನ್ನೂ ಗಂಗಾಧರರಾಯರು ನಡೆಸಬೇಕು ಎಂದು ಸೂಚಿಸಿದರು.

ಗಾಂಧೀಜಿಯ ಮೋಟಾರನ್ನು ಒಂದು ವೇದಿಕೆಯ ಬಳಿಗೇ ಒಯ್ದರು. ಅಲ್ಲಿ ಸದ್ದಿಲ್ಲದೆ ಗಾಂಧೀಜಿ ಒಂದು ಕುರ್ಚಿಯಲ್ಲಿ ಕುಳಿತರು. ಒಂದು ಬಿನ್ನವತ್ತಳೆ ಓದಿ, 8457 ರೂಪಾಯಿಗಳ ನಿಧಿಯನ್ನು ಅರ್ಪಿಸಿದರು. ಎಲ್ಲವೂ 8–10 ನಿಮಿಷಗಳಲ್ಲಿ ಮುಗಿಯಿತು. ಗಾಂಧೀಜಿ ಗಂಗಾಧರರಾಯರ ಕಿವಿಯಲ್ಲಿ ವಂದನೆಗಳನ್ನು ಹೇಳಿದರು. ಅವರು ಸಭೆಗೆ ಅದನ್ನು ಗಟ್ಟಿಯಾಗಿ ತಿಳಿಸಿದರು. ಪ್ರೇಕ್ಷಕರಿಗೆ ಬಹಳ ಸಂತೋಷ ಆಯಿತು. ಭಾಷಣವನ್ನು ಕೇಳಲಿಲ್ಲ ಎಂಬ ಕೊರತೆಯನ್ನು ಪ್ರದರ್ಶಿಸಲಿಲ್ಲ. ವ್ಯವಸ್ಥೆ ಅಷ್ಟು ಚೆನ್ನಾಗಿತ್ತು.

**ನಂದೀದುರ್ಗದ ವರ್ಣನೆ :**

ನಂದೀದುರ್ಗಕ್ಕೆ ಬಂದ ಮೇಲೆ (7–4–27) ಮಹದೇವದೇಸಾಯಿ ಹೀಗೆ ಬರೆದರು "ನಂದಿದುರ್ಗ ಬೆಂಗಳೂರಿನಿಂದ 35 ಮೈಲಿ ದೂರ. ಸಮುದ್ರದ ಮಟ್ಟಕ್ಕೆ 4850 ಅಡಿ ಎತ್ತರ. ಗಟ್ಟಿಕಲ್ಲಿನ ಗುಡ್ಡ. ಇದ್ದಕ್ಕಿದ್ದಂತೆ ಪಟ ಎದ್ದು, ದೂರದಿಂದ ನೋಡುವವರಿಗೆ ವಿಸ್ತಾರವಾದ ಮೈದಾನ ಮಧ್ಯೆ ಒಂದು ಪಿರಮಿಡ್ಡಿನ ಹಾಗೆ, ಅಥವಾ ಮೇಲೆದ್ದ ಒಂದು ಗುಮ್ಮಟದ ದೃಶ್ಯ ಕಾಣುತ್ತದೆ. ಇದರ ಇತಿಹಾಸ 11 ಶತಮಾನದವರೆಗಂತೂ ಹಿಂದಕ್ಕೆ ಹೋಗುತ್ತದೆ. ಬೆಟ್ಟದ ಮೇಲೆ ಇರುವ ಗುಡಿಯ ಶಿಲಾಶಾಸನಗಳು ಹೀಗೆ ತಿಳಿಸುತ್ತವೆ. ಮೊದಲಿನಿಂದಲೂ ಈ ಪ್ರದೇಶ ಹಿಂದೂ ರಾಜರ ಅಧೀನದಲ್ಲಿತ್ತು. ನಡುವೆ ಕೆಲವು ದಿನ ಟಿಪ್ಪು ಸುಲ್ತಾನ್ ಆಳಿದ ಕಾಲದಲ್ಲಿ ಮಾತ್ರ ಆಗಿರಲಿಲ್ಲ. ಟಿಪ್ಪು ಸುಲ್ತಾನ್ ಈ ದುರ್ಗವನ್ನು ಅಭೇದ್ಯವನ್ನಾಗಿ

ಮಾಡಿದ್ದನಂತೆ. 1791ರಲ್ಲಿ ಲಾರ್ಡ್ ಕಾರೆನ್‌ವಾಲಿಸ್ ನೇತೃತ್ವದಲ್ಲಿ ಇದನ್ನು ವಶಮಾಡಿಕೊಳ್ಳಲು 21 ದಿನ ಹಿಡಿಯಿತಂತೆ.

ಈ ಆಕ್ರಮಣದ ಕತೆಯನ್ನು ಮೈಸೂರಿನ ಶಾ ವಿಲ್ಕ್ಸ್ ಬಹಳ ಸ್ವಾರಸ್ಯವಾಗಿ ವರ್ಣಿಸಿದ್ದಾನೆ. ವಿಶೇಷ ಸೈನ್ಯಪಡೆಯ ದಳಪತಿ ಒಬ್ಬನ ಜಾಣತನದ ಧೈರ್ಯದ ಕತೆಯನ್ನು ಇಲ್ಲಿ ಹೇಳಬಹುದು. ಎಲ್ಲರೂ ಅಪ್ಪಣೆಗಾಗಿ ಕಾಯುತ್ತಿದ್ದರು. ಸದ್ದೇ ಇರಲಿಲ್ಲ. ಸ್ವಲ್ಪ ವೇಳೆಗೆ ಮೊದಲು ಒಬ್ಬ ಸಿಪಾಯಿ ಹೆಚ್ಚು ಯೋಚನೆ ಮಾಡದೆ ಒಂದು ಗಣಿಯ ಬಗ್ಗೆ ಏನೋ ಹೇಳಿದ. ದಳಪತಿ ಮೆಡೋಸ್ ಅದಕ್ಕೆ ಹೇಳಿದ "ಖಂಡಿತ ಇದು ಬಂಗಾರದ ಗಣಿ". ಆಗ ಒಂದು ಹುಸಿನಗೆ ಎಲ್ಲರ ಮುಖದಲ್ಲಿ ಅರಳಿ, ಸರಿಯಾದ ವಾತಾವರಣವನ್ನು ನಿರ್ಮಿಸಿತು. ಕೋಟೆಯ ಗೋಡೆಯಲ್ಲಿ ಬಿಟ್ಟಿರುವ ಬಿರುಕು ಈಗಲೂ ಕಾಣುತ್ತದೆ. ನಮ್ಮ ಜನರ ಪರಾಕ್ರಮದ ಕಥೆಗಳನ್ನು ನಾವು ಕೇಳಲಾರದೆ ಹೋದೆವು ಎನಿಸುತ್ತದೆ.

ಪೂನಾದ ಬಳಿ ಇರುವ ಸಿಂಹಗಡದ ಕೋಟೆಯ ಕತೆಗಳನ್ನು ಕೇಳಿದರೆ ರೋಮಾಂಚನವಾಗುತ್ತದೆ. ನಂದಿಬೆಟ್ಟದ ಮೇಲೆ ಇರುವ ಯೋಗ ನಂದೀಶ್ವರ ದೇವಸ್ಥಾನ ಚೌಕವಾಗಿ ಕಲ್ಲಿನ ಮೆಟ್ಟಿಲುಗಳಿಂದ ಅಮೃತ ಸರೋವರವನ್ನು ಬಿಟ್ಟರೆ, ಹಿಂದಿನ ಕಾಲದ ಹಿಂದೂ ವೈಭವದ ನೆನೆಪನ್ನು ಕೊಡುವ ಬೇರೆ ಯಾವ ಅವಶೇಷಗಳೂ ಇಲ್ಲ.ಇಲ್ಲಿ ಇರುವ ವೃಕ್ಷಗಳ ಹಣ್ಣಿನ ತೋಟ ಬ್ರಿಟಿಶ್ ದಳಪತಿ ಒಬ್ಬ ನೆಟ್ಟಿದ್ದು. ಇಲ್ಲಿರುವ ಬಂಗಲೆಗಳೂ ಅಷ್ಟೇ ಬ್ರಿಟಿಷ್ ಅಧಿಕಾರಿಗಳು ಬೇಸಗೆಯಲ್ಲಿ ಈ ತಣ್ಣನೆಯ ವಾತಾವರಣಕ್ಕೆ ಮನಸೋತು ಕಟ್ಟಿಸಿಕೊಂಡರು. ಸಿಂಹಗಡಕ್ಕಿಂತ ಈ ಬೆಟ್ಟ ಚಿಕ್ಕದೇ ಆದರೂ ಇದು ಒಂದು ಅಧಿಕೃತ ಗಿರಿಧಾಮ. ಅಂಬೋಲಿಯಲ್ಲಿ ಕಾಣಬರುವ ನೀರವತೆ ಇಲ್ಲಿ ಸಿಗುವುದಿಲ್ಲ. ಅಂಬೋಲಿಯಲ್ಲಿ ಇರುವ ದೃಶ್ಯಗಳ ಹಾಗೆ ಮನೋಹರತೆ ಇಲ್ಲ ದೃಶ್ಯಗಳಲ್ಲಿ. ಆದರೂ ಸಂಜೆಯ ಸೂರ್ಯಾಸ್ತದ ವೇಳೆ "ಮೋಡಗಳು ತೋರಿಸುವ ಬಣ್ಣಬಣ್ಣದ ನೋಟ ಕಣ್ಣಿಗೆ ಬೀಳುತ್ತದೆ. ಇಲ್ಲಿನ ಗಾಳಿ ನಿಜವಾಗಿ ಆರೋಗ್ಯವರ್ಧಕ.

1858ರಷ್ಟು ಹಿಂದೆಯೇ ಇಲ್ಲಿಂದ ಲೇಡಿ ಕ್ಯಾನಿಂಗ್ ಬರೆದಳು– "ಸುತ್ತಲೂ 150 ಮೈಲಿ ದೂರದ ಸೀಮೆ ಕಾಣುತ್ತದೆ. ಇಲ್ಲಿನ ಗಾಳಿಯೋ ಬಹಳ ತಣ್ಣಗೆ, ಬಹಳ ನವೋನವ. : ಈ ಸ್ಥಳ ಸಾಕಷ್ಟು ಆನಂದದಾಯಕ." ಇನ್ನು ಈ ಸ್ಥಳದ ವರ್ಣನೆ ಸಾಕು. ಇಲ್ಲಿನ ವಾತಾವರಣಕ್ಕೆ ಹೊಂದಿಕೊಳ್ಳಲು ಗಾಂಧೀಜಿಗೆ 5–6 ದಿನ ಬೇಕಾಯಿತು. ಮತ್ತೆ ಏನೋ ಹಿಮ್ಮುಖ ಎಂದು ಗಾಬರಿ ಆಗಿತ್ತು ಈಗ 3 ದಿನಗಳಿಂದ ಗಾಂಧೀಜಿಗೆ ತ್ರಾಣ ಹೆಚ್ಚುತ್ತಿದೆ. ಮೊದಲಿನಂತೆ ಓಡಾಡುತ್ತಾರೆ. ವಿಶ್ರಾಂತಿಯನ್ನು ಎಷ್ಟು ಪಡೆಯಬೇಕೋ ಅಷ್ಟು ಪಡೆದರೆ ಅವರು ಬೇಗನೆ ತಮ್ಮ ದಿನಚರಿಯ ಕೆಲಸಕ್ಕೆ ಸಿದ್ದ ಆಗಬಹುದು.

**ಸ್ವಾಗತ ಸಮಿತಿ :**

ಗಾಂಧೀಜಿ ಬೆಂಗಳೂರಿಗೆ– ನಂದಿ ಬೆಟ್ಟಕ್ಕೆ ಬರುವ ಮೊದಲೇ ಆಗ ಕಾಂಗ್ರೆಸ್ ನಾಯಕರು ಆಗಿದ್ದ ದಿ| ಟಿ. ಕೆ. ಭಾಷ್ಯಂ ಅವರೂ, ಶ್ರೀ ಎಮ್. ಜಿ ಲಕ್ಷ್ಮೀನರಸು ಅವರೂ ಒಂದು ಸ್ವಾಗತ ಸಮಿತಿಯನ್ನು ರಚಿಸಲು ಸಭೆ ಕರೆದಿದ್ದರು. ವೈ.ಎಮ್.ಸಿ.ಎ. ಅಲ್ಲಿ ಈ ಸಭೆ ನೆರೆಯಿತು. ಭಾಷ್ಯಂ ಅವರು ಬೆಂಗಳೂರಿನ 50 ಜನ ಪ್ರಮುಖರನ್ನು ಚಹಾಕ್ಕೆ ಕರೆದಿದ್ದರು. ಸಭೆಗೆ ಪ್ರಮುಖರು ಯಾರೂ ಬರಲಿಲ್ಲ. ಆಗ ತಾನೆ ಹಂಗಾಮಿ ದಿವಾನ್ ಗಿರಿಯಿಂದ ನಿವೃತ್ತರಾಗಿದ್ದ ಮೀರ್ ಹಂಜಾಹುಸೇನ್ ಸಾಹೇಬರೂ ಮುಂದೆ ಸಚಿವರಾಗಿದ್ದ ರಾಜಸೇವಾಸಕ್ತ ಸುಬ್ಬರಾಮ ಶೆಟ್ಟರೂ, ಈಗ ನಿವೃತ್ತರಾಗಿರುವ ನ್ಯಾಯಮೂರ್ತಿ ನಾಗೇಶ್ವರ ಅಯ್ಯರ್ ಅವರೂ ಬಂದಿದ್ದರು.

"ಮಹಾತ್ಮ ಗಾಂಧಿ ಸ್ವಾಗತ ಸಮಿತಿ' ಒಂದನ್ನು ರಚಿಸಲಾಯಿತು. ಮೀರ್ ಹಂಜಾಹುಸೇನ್ ಅಧ್ಯಕ್ಷರು. ಸುಬ್ಬರಾಮ ಶೆಟ್ಟರೂ, ನಾಗೇಶ್ವರ ಅಯ್ಯರ್ ಅವರೂ ಖಜಾಂಚಿಗಳು, ಭಾಷ್ಯಂ ಮತ್ತು ಲಕ್ಷ್ಮೀನರಸು ಕಾರ್ಯದರ್ಶಿಗಳು. ಮೆಜೆಸ್ಟಿಕ್ ಸಿನಿಮಾದ * ಮುಂದೆ ಇದ್ದ ಆರ್ಯನ್ ಲೋಯರ ಸೆಕೆಂಡರಿ ಸ್ಕೂಲಿಗೆ ಎದುರಾಗಿ ಒಂದು ಕೊಠಡಿಯಲ್ಲಿ ' ಸ್ವಾಗತ ಸಮಿತಿ ಕಚೇರಿ ಪ್ರಾರಂಭ ಆಯಿತು. ಆಮೇಲೆ ಇಡೀ ಸಂಸ್ಥಾನಕ್ಕೆ ಒಂದು ಸ್ವಾಗತ ಸಮಿತಿ ಆಯಿತು.



ಗಾಂಧೀಜಿ ಬೆಂಗಳೂರಿಗೆ ಬಂದದ್ದು ಏಪ್ರಿಲ್ 29, 1927. ಪೂರ್ಣ ಖಾದೀಧಾರಿ ಆದ ಹಂಜಾಹುಸೇನ್ ಸಾಹೇಬರ ನೇತೃತ್ವದಲ್ಲಿ ಬೆಂಗಳೂರು ನಗರದ ರೈಲು ನಿಲುಮನೆಯಲ್ಲಿ ಸ್ವಾಗತ ಸಮಿತಿ ಅವರನ್ನು ಬರಮಾಡಿಕೊಂಡು ನೇರವಾಗಿ ನಂದಿಬೆಟ್ಟಕ್ಕೆ ಕರೆದುಕೊಂಡು ಹೋಯಿತು.

**ವೈದ್ಯರೊಡನೆ ಸಂಭಾಷಣೆ :**

ಆದರೆ ವೈದ್ಯರದು ಎಲ್ಲರದೂ ಒಂದೇ ಅಭಿಪ್ರಾಯ–ಸ್ವಲ ನಿಧಾನ ಮಾಡಿ. ವೈದ್ಯರು ಅನೇಕರು ಗಾಂಧೀಜಿಯನ್ನು ಪರೀಕ್ಷಿಸಲು ದಯಮಾಡಿದ್ದಾರೆ. ನಿವೃತ್ತರಾಗಿರುವ ' ಡಾ| ಬಿ.ಸಿ. ರಾಮರಾಯರು ಇಲ್ಲಿರುವಷ್ಟು ದಿನ, ದಿನವೂ ಬರುತ್ತಿದ್ದರು. ಲಂಡನ್ ಮಿಶನಿನ ದಯಾಜೀಯ ಡಾ| ಥಾಂಪ್ಸನ್ ಎರಡು ಸಲ ಬಂದಿದ್ದರು. ಬೆಂಗಳೂರಿನ ವಿಕ್ಟೋರಿಯಾ ಅಸ್ಪತ್ರೆಯ ಡಾ| ಸುಬ್ಬರಾಯರೂ, ಕೃಷ್ಣಸ್ವಾಮಿಯವರೂ ಹೊತ್ತಿಗೆ ಸರಿಯಾಗಿ ಬಂದರು. ಅವತ್ತು ಅವರು ಬರುವ ವೇಳೆಗೆ ನಮಗೆಲ್ಲ ಗಾಬರಿ ಆಗಿತ್ತು. ಬಂದವರು ಪದೇ ಪದೇ ಬರುವುದಾಗಿ ಮಾತು ಕೊಟ್ಟರು. ಗಾಂಧೀಜಿ ಅಂಥವರ ಸಂಯಮಶೀಲ ಜೀವನದಲ್ಲಿ ಇಷ್ಟು ಹೆಚ್ಚು ರಕ್ತದ ಒತ್ತಡ ಹೇಗೆ ಬಂತು ಎಂದು ಎಲ್ಲರಿಗೂ ಅಶ್ಚರ್ಯ. ಪರಿಹಾರಕ್ಕಾಗಿ ಅನೇಕ ಉಪಯುಕ್ತ ಸೂಚನೆಗಳನ್ನು ಕೊಟ್ಟರು. "ಇಷ್ಟು ಎತ್ತರದ ಸ್ಥಳದಲ್ಲಿ ವಾಸಮಾಡುವುದು

ನನ್ನ ಆರೋಗ್ಯಕ್ಕೆ ತಕ್ಕ ಅಲ್ಲ ಎಂದು ನಿಮಗೆ ನಂಬಿಕೆಯೋ" ಎಂದು ಗಾಂಧೀಜಿ ಒಬ್ಬ ವೈದ್ಯರನ್ನು ಕೇಳಿದರು. "ಗ್ರಂಥಗಳಿಂದಲೂ ನಿಮಗೆ ಭರವಸೆ ಕೊಡಬಲ್ಲೆ" ಎಂದರು ವೈದ್ಯರು.

"ನನಗೆ ಅದರ ಚಿಂತೆ ಇಲ್ಲ. ಆದರೆ ಇಲ್ಲಿಗೆ ಕರೆತಂದೆನಲ್ಲ ಎಂದು ರಾಜಗೋಪಾಲಚಾರಿಗೆ ಚಿಂತೆ ಆಗಬಹುದು. ಅವರ ಚಿಂತೆ ಕಳೆದಿದ್ದೀರಿ ನೀವು ಎಂದು ನನಗೆ ಸಂತೋಷ ."ಆದರೆ ಪಠ್ಯ ಪುಸ್ತಕಗಳನ್ನು ಹೇಗೆ ನಂಬಬೇಕು?"

"ಅನೇಕ ಪ್ರಯೋಗ–ಪ್ರಮಾಣಗಳ ಆಧಾರಗೊಂಡಿವೆ ಅವು'

'ಇನ್ನೊಬ್ಬ ವೈದ್ಯ ಬಂದು ಬೇರೆ ಒಂದು ಪ್ರಮಾಣವನ್ನು ನನ್ನ ಮುಖಕ್ಕೆ ಎಸೆದರೆ ಹೇಗೆ? ಈ ಜೀತ ಪ್ರಮಾಣದ ಮುಂದೆ ಆ ಪ್ರಮಾಣಗಳದು ಏನು ? ವೈದ್ಯರು ಬಹಳ ಸ್ನೇಹಪೂರ್ಣ ಆಗಿದ್ದರು. ಗಾಂಧೀಜಿಗೂ ಸ್ವಲ್ಪ ವಿನೋದ ಮಾಡಬೇಕು ಎನಿಸಿತು.

ಗಾಂಧೀಜಿ ಅವರಿಗೆ ಒಂದು ಕತೆ



ಹೇಳಿದರು – "ಶ್ರೀಮತಿ ಮೇಬ್ರಿಕ್ ವಿಷಯ ನಿಮಗೆ ಗೊತ್ತೆ? ಒಬ್ಬ ಕೋಟೀಶ್ವರನ ಮಗಳು. ಅವಳ ಗ0ಡ ಇನ್ನೊಬ್ಬ ಕೋಟೀಶ್ವರ. ಗ0ಡನನ್ನು ಕೊಲೆ ಮಾಡಿದಳು ಎಂಬ ಆರೋಪಕ್ಕೆ ಗುರಿಯಾದಳು" ಆಕೆ ಕಡೆ ಭಾರೀ ವಕೀಲರ ಇದ್ದರು. ವೈದ್ಯರು ಅನೇಕರನ್ನು ಪರೀಕ್ಷಿಸಿದರು. ಆಕೆ ಕೊಟ್ಟ ವಿಷದ ಪ್ರಮಾಣ (ಆರ್ಸೆನಿಕ್ಸ್) ಕೊಲ್ಲುವಷ್ಟು ಅಲ್ಲ ಅನ್ನುವುದು ಒಂದು ಕಡೆಯ ವಾದ. ಕೊಲ್ಲುವಷ್ಟು ಎಂದು ಇನ್ನೊಂದು ಕಡೆಯ ವಾದ.

ನ್ಯಾಯಾಧೀಶ ಎರಡೂ ಕಡೆಯ ವಾದಗಳನ್ನು ಸಂಕ್ಷೇಪವಾಗಿ ಹೇಳಿ 'ಪಂಚಾಯ್ತಿಗೆ ಹೇಳಿದ. "ಕೋಟು ಗೃಹಸ್ಥರಂತೆ ತೀರ್ಪನ್ನು ಕೊಡಿ. ಮನುಷ್ಯ ಸ್ವಭಾವ ನಿಮಗೆ ಗೊತ್ತು. ವೈದ್ಯರ ಸಾಕ್ಷ್ಯಕ್ಕೆ ಎಳ್ಳಷ್ಟೂ ಬೆಲೆ ಕೊಡಬೇಡಿ. ಕೊಡುವ ಔಷಧದ ಬಗ್ಗೆ ಅವರಿಗೆ ಗೊತ್ತಿರುವುದು ಬಹಳ ಸ್ವಲ್ಪ. ಯಾರಿಗೆ ಕೊಡುತ್ತಾರೊ ಅವರ ದೇಹದ ಬಗ್ಗೆ ಗೊತ್ತಿರುವುದು ಇನ್ನೂ ಸ್ವಲ್ಪ'. ಎಲ್ಲರೂ ಗಟ್ಟಿಯಾಗಿ ನಕ್ಕರು. "ಆ ಕಾಲಕ್ಕೆ ಅದು ಸರಿಯೋ ಏನೋ. ಈಗಂತೂ "ಅಲ್ಲ–ಎಂದು. ಒಬ್ಬ ವೈದ್ಯರು; ಇದು ಏಕೆ ಅಲ್ಲ? ಏಳನೇ ಎಡ್ವರ್ಡ್‌ನ ರಾಜವೈದ್ಯ ಸರ್ ಫ್ರೆಡರಿಕ್ ಟ್ರೀವ್ ಇದನ್ನೇ ತಾನೇ ಹೇಳಿದ ಎಂದು ಗಾಂಧೀಜಿ ಹೇಳಿದರು.

ರಾಜಗೋಪಾಲಾಚಾರಿಯವರು ಹೇಳಿದರು "ಅದೆಲ್ಲ ಹಳೆಯ ಕಾಲ ಆಗ ಸುಬ್ಬರಾಯರು ಇನ್ನೂ ವಿದ್ಯಾರ್ಥಿಗಳು".ಮತ್ತೆ ನಗು. ಹೀಗೆಂದರೆ ವೈದ್ಯರ ಸಲಹೆಯನ್ನು ಕೇಳುವುದಿಲ್ಲ ಗಾಂಧೀಜಿಎಂದಲ್ಲ . ಕೆಲವು ಸಲ ಸ್ವಂತ ತಾವೇ ತೀರ್ಮಾನಿಸಿಕೊಳ್ಳುತ್ತಾರೆ. ಆ ತೀರ್ಮಾನಗಳು ನಮ್ಮನ್ನು ಗಾಬರಿಗೊಳಿಸುತ್ತವೆ. ವೈದ್ಯರದು ಎಲ್ಲರದೂ ಏಕಾಭಿಪ್ರಾಯ–ಮನಸ್ಸಿಗೆ ಅತ್ಯಧಿಕ ಶ್ರಮ ಆಗಿ ಈ ದುರವಸ್ಥೆ ತಲೆ ಹಾಕಿತು. ಹೀಗೆ ಹೇಳಿದರೆ ಸಹಜವಾಗಿ ನಮಗೆ ಹೊಳೆಯುವುದು ಇಷ್ಟು ಶ್ರಮ ಕೊಡುವ ಕಾರ್ಯಗಳನ್ನು ಕೈಗೊಂಡುದು.ಇನ್ನು ಮುಂದೆ ಇಂಥದನ್ನು ಕೈಗೊಳ್ಳದಂತೆ ಶಕ್ತಿಗೆ ಮೀರದಂತೆ ಎಚ್ಚರಿಕೆ ವಹಿಸಬೇಕು.

ಪ್ರಜ ಗಾಂಧೀಜಿಗೆ ತೋಚುವುದೇ ಬೇರೆ. ಕೆಲವು ದಿನಗಳ ಹಿಂದೆ ಗಾಂಧೀಜಿ ' ಒಂದು ಪತ್ರದಲ್ಲಿ ಹೀಗೆ ಬರೆದರು.

**ಉಪವಾಸದ ಪ್ರಸ್ತಾಪ;**

"ಉಪವಾಸ ಮಾಡುವುದು ಒಳ್ಳೆಯದು. ನರಗಳಿಗೆ ಶ್ರಮ ಹೆಚ್ಚಾದಾಗಲಂತೂ ಶಾರೀರಿಕ ದೃಷ್ಟಿಯಿದ ಒಳ್ಳೆಯದು . ಇಲ್ಲ. ಈ ದುರವಸ್ಥೆಗೆ ಮೊದಲೇ ನಾನು ಉಪವಾಸ ಮಾಡಿದ್ದರೆ ಚೆನ್ನಾಗಿತ್ತು. ಅವತ್ತಿನ ಶ್ರಮ ಬಲು ಭಯಂಕರ. ಆದರೆ ಕೆಟ್ಟ ಮೇಲೆ ಬುದ್ಧಿ ಬಂದಂತೆ ಇದು. ನನ್ನ ಈ ಬುದ್ಧಿ ಇಲ್ಲದ ತಪ್ಪಿನಿಂದ ಇತರರೂ ಲಾಭ ಪಡೆಯಬಹುದು. ನನ್ನದು ಮೂರ್ಖತನ . ಏಕೆಂದರೆ ಶ್ರಮದ ಭಾರವೂ ನನಗೆ ಗೊತ್ತಿತ್ತು.

ಅಂಥ ಪ್ರಸಂಗದಲ್ಲಿ ಉಪವಾಸ ಮಾಡುವುದರ ಮಹತ್ವವೂ ನನಗೆ ಗೊತ್ತಿತ್ತು. ಕಲಿ,ಯಾವಾಗಲೂ ನಮ್ಮ ಬೆನ್ನ ಹಿಂದೆಯೇ ಇರುತ್ತಾನೆ. ನಾವು ಸ್ವಲ್ಪ ಎಚ್ಚರ ತಪ್ಪಿದರೆ ಸಾಕು ಹಿಡಿದುಕೊಳ್ಳುತ್ತಾನೆ. ನಾನು ಎಚ್ಚರ ತಪ್ಪಿದೆ. ದುರ್ಬಲ ಆಗಿದ್ದೆ. ನೋಡಿ ನನಗೆ ಇಷ್ಟೆಲ್ಲ ಆದ ಮೇಲೆ ಏನು ಹೇಳಬಹುದು? ಗಾಂಧೀಜಿಗೆ ಅಧಿಕ ಶ್ರಮವನ್ನು ಕೊಟ್ಟು, ಅವರ ಕಾರ್ಯವನ್ನು ವಿಸ್ತರಿಸುವ ಮೂಲಕ ಸಹಾನುಭೂತಿ ಇಲ್ಲದ ಹಟದ ತಪ್ಪನ್ನು ಮಾಡಿ ಮತ್ತೊಮ್ಮೆ ಸತ್ತೆ

**ಆರ್ಥಿಕ ದಾಹ:**

ಸಂಸ್ಥಾನದ ಹಿರಿಯ ಅಧಿಕಾರಿ ಬಂದು ಮೊನ್ನೆಯ ದಿನ ಗಾಂಧೀಜಿಗೆ ಒಂದು ಪ್ರಶ್ನೆ ಕೇಳಿದರು. ಆ ಪ್ರಶ್ನೆ ಅವರನ್ನು ಬಹು ಕಾಲದಿಂದ ಕಾಡುತ್ತಿತ್ತು "ಜನರ ಆಧ್ಯಾತ್ಮಿಕ ಜ್ಞಾನ ಹೆಚ್ಚಿಸದು ಎಂದು ನಿಮಗೆ ಗೊತ್ತಿದೆ. ಆದರೂ ಆರ್ಥಿಕ ದಾಹದ ವಿಷಯವನ್ನು ಒತ್ತಿ ಹೇಳುತ್ತೀರಿ? ವಾತಾವರಣದಲ್ಲಿ ವಿದ್ವೇಷ, ವಿರಸ, ಕಲಹ ವಂಚನೆ ತುಂಬಿದೆ.ಈ ಜನ್ಮದಲ್ಲಿ ಯಾವ ಆಸೆಯೂ ಇಲ್ಲ, ಮುಂದಿನ ಜನ್ಮಕ್ಕೂ ಇಲ್ಲ. ನಿಮ್ಮಂಥ ಉನ್ನತ ಆಧ್ಯಾತ್ಮಿಕ ವ್ಯಕ್ತಿಗಳು ಆಧ್ಯಾತ್ಮಿಕ ಅವಶ್ಯಕತೆಯನ್ನು ತುರುಕಿ ಗಾಂಧೀಜಿಗೆ ಶ್ರಮ ಕೊಡಬೇಕು ಎಂದು ಬಂದಿರಲಿಲ್ಲ.

ಗಾಂಧೀಜಿ ಹಾಸಿಗೆಯಲ್ಲಿ ಮಲಗಿದ್ದರು. ಮಲಗಿಯೇ ಬಹಳ ಹುರುಪಿನಿಂದ ಉತ್ತರ ಕೊಟ್ಟರು: "ನೀವು ಹೇಳುವುದು ವಿದ್ಯಾವಂತ ವರ್ಗದ ಬಗ್ಗೆ ನಿಜ ಇರಬಹುದು.

ಅವರ ಮುಂದೆ ರಾಟೆಯ ಆರ್ಥಿಕ ವಿಷಯವನ್ನು ನಾನು ಪ್ರಸ್ತಾಪಿಸುವುದೇ ಇಲ್ಲ. ಅವರೂ ಈ ವಿಷಯದ ಈ ಆಧ್ಯಾತ್ಮಿಕ ಭಾಗವನ್ನು ಅರಿತುಕೊಂಡರೆ ಸಾಕು. ರಾಟೆಯಿಂದ ನೂತು ಖಾದಿ ಧರಿಸಿದರೇನೇ ಬಡವರಲ್ಲಿ ಅವರಿಗೆ ಇರುವ ಸಹಾನುಭೂತಿ ಪ್ರಕಟ ಆಗುತ್ತದೆ.

ಬಡವರ ಪಾಲಿಗೆ ಅರ್ಥಿಕ ವಿಷಯವೇ ಆಧ್ಯಾತ್ಮಿಕ ವಿಷಯ. ಹೊಟ್ಟೆಗೆ ಇಲ್ಲದೆ ಸಾಯುತ್ತಿರುವ ಈ ಬಡ ಜನರಿಗೆ ಬೇರೆ ಯಾವ ಬಗೆಯ ಪ್ರಚೋದನೆಯೂ ಇಲ್ಲ. ಹಾಗೆ ಮಾಡಿದರೆ ನಿರರ್ಥಕ. ಕಿವುಡನ ಮುಂದೆ ಕಿನ್ನರಿ ಬಾರಿಸಿದಂತೆ. ಅದೇ ಅವರಿಗೆ ಆಹಾರ ತೆಗೆದುಕೊಂಡು ಹೋಗಿ. ನಿಮ್ಮನ್ನು ದೇವರು ಎನ್ನುತ್ತಾರೆ. ಅವರಿಗೆ ಬೇರೆ ಯೋಚನೆಯೇ ಬರುವುದಿಲ್ಲ. ದಕ್ಷಿಣ

ಆಫ್ರಿಕಾಕ್ಕೆ ದಳಪತಿ ಬೂತ್ ಬಂದಾಗ ಅವರ ಮೇಲೆ ಸಮಾಜವಾದಿಗಳು ಪ್ರಶ್ನೆಗಳ ಸುರಿಮಳೆ ಕರೆದರು. ತನ್ನ ಬಳಿಗೆ ಬಂದವರನ್ನು ತನ್ನ ಬೆಂಕಿ ಪೆಟ್ಟಿಗೆಯ ಕಾರಖಾನೆಯಲ್ಲಿ ಕೆಲಸ ಮಾಡಲು ನೇಮಿಸಿ ಕೇವಲ ಐಹಿಕ ಅಂಶವನ್ನು ಮುಂದೆ ಮಾಡುತ್ತೀರಿ ಎಂದರು.

"ನಾನು ಬೇರೆ ಏನು ಮಾಡಲಿ? ಎಲ್ಲ ಬಗೆಯ ಜನಗಳು ನನ್ನ ಬಳಿಗೆ ಬರುತ್ತಾರೆ. ನಿರುದ್ಯೋಗಿ, ತಿರುಕ, ಒರಟ, ಲಫಂಗ ಎಲ್ಲರೂ. ಅವರಿಗೆ ನೀತಿಯನ್ನು ನಾನು ಉಪದೇಶಿಸಲೆ?

ನಾನು ಮೊಟ್ಟಮೊದಲು ಅವರಿಗೆ ಕೊಡುವ ಭರವಸೆ ಅನ್ನದ್ದು. ಇಲ್ಲಿ ಕೆಲಸ ಇದೆ.ಮಾಡಿ .ಒಂದು ಹಿಡಿ ಹಿಟ್ಟು ಗಳಿಸಿಕೊಳ್ಳಿ ಎನ್ನುತ್ತೇನೆ" ಇನ್ನೂ ಹೀಗೆಯೇ ಹೇಳುತ್ತಾರೆ ಬೂತ್.

ಗಾಂಧೀಜಿಗೆ ತುಂಬಾ ಆಯಾಸ ಆಯಿತು ಎಂದು ಆ ಸ್ನೇಹಿತರಿಗೆ ಅರ್ಥ ಆಯಿತು. ಅವರು ಅಪ್ಪಣೆ ಪಡೆದು ಹೊರಟುಬಿಟ್ಟರು. ಗಾಂಧೀಜಿಗೆ ಅರ್ಥವಾಯಿತು. ಈ ಮಾತುಕತೆಯಿಂದ ತಮಗೆ ಆಯಾಸವಾಯಿತು ಎಂದು ಸಂಜೆ ಹೇಳಿದರು: ಅತಿ ಶ್ರಮ ಮೂಲಕವಾಗಿಯೂ ಇರಬಹುದು ನನ್ನ ಈ ರಕ್ತದ ಒತ್ತಡ, ನಾನು ವಿಶ್ರಾಂತಿ ಪಡೆಯುತ್ತ ಇಲ್ಲವೇ? ಆದರೆ ರಾಟೆಯ ವಿಷಯದಂಥ ಮಾತು ಬಂದರೆ ನಾನು ಹೇಗೆ ನುಂಗಿಕೊಳ್ಳಲಿ?

ಯಾರಾದರೂ ಆ ಪ್ರಸ್ತಾಪಮಾಡಿದರೆ ಸಾಕು. ನನ್ನ ಒಳಗಡೆ ಒಂದು ಜ್ವಾಲಾಮುಖಿಯೇ ಆಡುತ್ತದೆ. ನಾನು ಏನು ಮಾಡಲಿ? ರಾಷ್ಟ್ರದ ಈ ದಾರಿದ್ಯ, ರೋಗ– ಸೋಮಾರಿತನ– ಮನಸ್ಸಿಗೆ ಬಂತೋ, ನನ್ನ ಕಾಯಿಲೆ ಅದರ ಮುಂದೆ ಏನು ಮಹಾ? ನನ್ನ ಹೃದಯದಲ್ಲಿ ಆಳವಾಗಿ ನಾಟಿ ಹೋಗಿದೆ ಈ ದುರವಸ್ಥೆಯ ಪ್ರಶ್ನೆ"

**ಗಾಂಧೀಜಿಯ ಆರೋಗ್ಯ :**

ಮುಂದಿನ ವಾರ (5–5–27) ಮಹದೇವ ದೇಸಾಯಿ ಬರೆದರು: "ಗಾಂಧೀಜಿ ಈಗ ಗುಣಮುಖರಾದರು ಎಂದು ಖಂಡಿತ ಹೇಳಬಹುದು. ಗಾ0ಧೀಜಿ ಊಹಿಸಿದ್ದ ಒಂದು ಮಾತನ್ನು ಕಳೆದ ಸಲ ಬರೆದಾಗ ನನಗೆ ಸ್ವಲ್ಪ ಗಾಬರಿಯೇ ಇತ್ತು. ರಕ್ತದ ಒತ್ತಡ ಹೆಚ್ಚು ಆದರೆ ಏನು ಅದಕ್ಕೆ ಪರಿಹಾರ ಎಂದು ಅವರು ಬಹು ಕಾಲದಿಂದ ಯೋಚಿಸುತ್ತ ಇದ್ದಂತೆ ಇದೆ. ಡಾ। ಅನ್ಸಾರಿ ಬರೀ ಮೈಗೆ ಮಾತ್ರವೇ ಅಲ್ಲ, ಮನಸಿಗೂ ವಿಶ್ರಾಂತಿ ಕೊಡಿ ಎಂದು ಬರೆದರು. ಚಿಂತೆ ಬಿಡದೆ, ಅಥವಾ ಆಲೋಚನೆ ಮಾಡುವುದನ್ನು ಬಿಡದೆ ಹೇಗೆ ಕೊಡಬೇಕು ಮನಸಿಗೆ ವಿಶ್ರಾಂತಿ? ಇದು ಒಂದು ಸಮಸ್ಯೆ. ಅನ್ಸಾರಿಗೆ ಒಂದು ದೀರ್ಘ ಪತ್ರ ಬರೆದು ತಮ್ಮ ಈ ಸಮಸ್ಯೆಯನ್ನು ತಿಳಿಸಿದರು ಗಾಂಧೀಜಿ.

" ಹಿಂದೂಗಳು – ಮುಸಲ್ಮಾನರು ಮಾಡುತ್ತಿರುವ ಈ ಕೃತ್ಯಗಳನ್ನು ನೋಡಿ ನಾನು ತೀವ್ರವಾಗಿ ವಿಚಾರ ಮಾಡದೆ ಹೇಗೆ ಇರಲಿ? ಕೋಟ್ಯಂತರ ಜನ ದಿನೇ ದಿನೇ ಅಡ್ಡಡ್ಡ ನಡೆದು ಹೋಗುತ್ತಿರಲು ನನ್ನ ಮನಸ್ಸು ಯೋಚಿಸದೆ ಹೇಗೆ ಇದ್ದೀತು? ಈ ವಿಷಯಗಳನ್ನು ನಿರಂತರವೂ ಯೋಜಿಸಲು ನಾನು ಪತ್ರಿಕೆ ಓದಬೇಕಾಗಿಲ್ಲ, ಸುದ್ದಿ ತಿಳಿದುಕೊಳ್ಳಬೇಕಾಗಿಲ್ಲ. ನಾನು ಈ ವಿಷಯಗಳನ್ನು ಯೋಚಿಸಬಾರದು ಎಂದಿದ್ದರೆ ಹಿಂದೂಗಳು ಮುಸಲ್ಮಾನರು ಮನುಷ್ಯರಂತೆ ವರ್ತಿಸಬೇಕು. ಮನುಷ್ಯೇತರ ಪ್ರಾಣಿಗಳಂತೆ ವರ್ತಿಸಬಾರದು; ನಮಗೆ ನಿತ್ಯವೂ ಬೇಕಾದುದಕ್ಕಿಂತ ಯಾವ ಯಾವ ಜನಕ್ಕೆ ಪ್ರಾಪ್ತಿ ಸಿಗುತ್ತದೆಯೋ ಅವರು ನಮ್ಮ ದೇಶದ ಜನಕೋಟಿಯ ಬಗ್ಗೆ ಯೋಚನೆ ಮಾಡಲಿ ಮತ್ತು ಅವರಿಗೋಸ್ಕರ ಪರದೇಶೀ ಬಟ್ಟೆಗಳನ್ನು ಬಹಿಷ್ಕರಿಸಿ ಜನಕ್ಕೆ ಪ್ರೋತ್ಸಾಹ ಸಿಗಲಿ ಎಂದು ವಿರಾಮ ಪಡೆದು ನೂಲಲಿ.

ಆದರೆ ಡಾಕ್ಟರಿಗೆ ಈ ಸಮಸ್ಯೆಯನ್ನು ಪರಿಹರಿಸಲು ಆಗಲಿಲ್ಲ. ಗಾಂಧೀಜಿ ತಾವೇ ಒಂದು ಪರಿಹಾರವನ್ನು ಸೂಚಿಸಿ ಡಾಕ್ಟರರನ್ನು ಕೇಳಿದರು. 1924ರ ಉಪವಾಸದಲ್ಲಿ ಡಾ। ಅನ್ಸಾರಿ ಶುಶ್ರೂಷೆ ಮಾಡುತ್ತಿದ್ದುದರಿಂದ ಏನಾದರೂ ಕಠಿಣ ಕಾರ್ಯಕ್ರಮ ಕೈಗೊಳ್ಳುವ ಮೊದಲು ಡಾಕ್ಟರ್ ಅವರನ್ನು ಕೇಳೋಣ ಎನಿಸಿತು.

ಆಗ ಗಾಂಧೀಜಿ ಡಾಕ್ಟರಿಗೆ "ಹೆಚ್ಚು ಮಾನಸಿಕ ಪರಿಶ್ರಮ ಆದರೇನೆ ರಕ್ತದ ಒತ್ತಡ ಹೆಚ್ಚಾಗುತ್ತದೆ. ಎಂದರೆ ಈ ಬಿಗಿತವನ್ನು ತಪ್ಪಿಸಲು ಒಂದೇ ದಾರಿ– ಉಪವಾಸ ಮಾಡುವುದು ಎನ್ನುತ್ತೇನೆ. ನನ್ನ ಒಳಗಡೆ ಆಳದಲ್ಲಿ ಇದಕ್ಕೆ "ದೀರ್ಘ ಉಪವಾಸವೇ ಚಿಕಿತ್ಸೆ ಎನಿಸುತ್ತದೆ. 21 ದಿನ ಉಪವಾಸ ಮಾಡಿದಾಗ ನೋಡಿದೆನಲ್ಲ. 10 ದಿನಗಳ ನಂತರ ಹೊರ ಜಗತ್ತಿನ ಆಲೋಚನೆಯೇ ನಿಂತುಹೋಯಿತು.

ಉಪವಾಸದಿಂದ ತಾತ್ಕಾಲಿಕವಾಗಿ ಮನಸ್ಸು "ಸಮಸ್ಥಿತಿಗೆ ಬಂತು. ನಾನು ಊಟ ಮಾಡುವಾಗಲೂ ಮನಸ್ಸು ಆಲೋಚಿಸಿದೇ ಇರಲು ನಿರಾಕರಿಸುತ್ತದೆ. ಇದು ಸಾಧ್ಯವೂ ಇಲ್ಲ. ಆದರೆ ಉಪವಾಸ ಮಾಡಿದಾಗ ಮನಸ್ಸು ಆಲೋಚನೆ ಮಾಡದೆ ಇರಲು ಸಹಕರಿಸುತ್ತದೆ. ವೈದ್ಯರು– ದಂಡಿಗೆ ದಂಡೇ–ನನ್ನನ್ನು ಪರೀಕ್ಷಿಸುತ್ತ ಇದ್ದಾರೆ. ನಾನೋ ಅಳಲೆಕಾಯಿ ಪಂಡಿತರ ಅಭಿಪ್ರಾಯಗಳನ್ನು ಕೇಳುತ್ತೇನೆ.ಶುಶ್ರೂಷೆ ಮಾಡುವವರ ಶ್ರದ್ಧೆಯಲ್ಲಿ ಕಿಂಚಿತ್ತೂ ಕೊರತೆ ಇಲ್ಲ. ಏಕಾಗ್ರವಾಗಿ ನಿಷ್ಠೆಯಿಂದ ಶುಶ್ರೂಷೆ ನಡೆಯುತ್ತಿದೆ. ಎಷ್ಟೆ ಇದ್ದರೂ ರಕ್ತದ ಒತ್ತಡ ಕಡಿಮೆ ಆಗದಿದ್ದರೆ, ನನ್ನ ಸ್ನೇಹಿತರಿಗೆ ತಾತ್ಕಾಲಿಕ ಆಗಿ ನೋವು ಎನಿಸಿದರೂ ಇತ್ತಲೂ ಇಲ್ಲದ ಅತ್ತಲೂ ಅಲ್ಲದ ಬಾಧೆಯನ್ನು ತಗ್ಗಿಸಲು ಅಥವಾ ಕೊನೆಗಾಣಿಸಲು ಒಂದು ಉಪವಾಸ ಮಾಡಬೇಕು ಎನಿಸುತ್ತದೆ. ಆಗ ಈ ಒತ್ತಡ ತಗ್ಗುತ್ತದೆ".

ಇಂಥ ದುರಂತ ವಿಚಾರಗಳನ್ನು ರೋಗಿ ಒಳಗೊಳಗೇ ಮಾಡುತ್ತಿದ್ದರೆ, ನಾವು ಎಷ್ಟು ಗಾಬರಿ ಆಗಬೇಡ? ಆದರೆ ನಮ್ಮ ಪುಣ್ಯ ಪ್ರಕೃತಿ ಗೆದ್ದಿತು. ದೀರ್ಘ ಉಪವಾಸಕ್ಕೆ ಅವಕಾಶ ಇಲ್ಲದಂತೆ ಮಾಡಿತು. ಕಳೆದ ವಾರ ಅನಿರೀಕ್ಷಿತವಾಗಿ ರಕ್ತದ ಒತ್ತಡ ಬಹಳ ತಗ್ಗಿತು.ಈಗ ಅಂಥ ತೀಕ್ಷ್ಣ ಕ್ರಮಕ್ಕೆ ಅಗತ್ಯ ಉಳಿಯಲಿಲ್ಲ. ಈಗಿನ ಅವರ ದೇಹ ಸ್ಥಿತಿಯನ್ನು ಗಾಂಧೀಜಿಯವರ ಮಾತಿನಲ್ಲೇ ಹೇಳಬಹುದು : ಈಗಾಗಲೇ ನನಗೆ ಎಷ್ಟು ಸಾಮರ್ಥ್ಯ ಬಂದಿದೆ ಎಂಬುದನ್ನು ನೀವು ಊಹಿಸಲಾರಿರಿ. ಈ ವಾರ ನವಜೀವನಕ್ಕೆ ನಾಲ್ಕು ಲೇಖನ ಬರೆದಿದ್ದೇನೆ. ನನ್ನ ದಿನಚರಿಯ ಕೆಲಸ ಮಾಡುತ್ತಲೇ ಇದ್ದೇನೆ. ಸ್ವಲ್ಪ ಮಟ್ಟಿಗೆ ಸ್ನೇಹ ಪತ್ರಗಳನ್ನು ಬರೆಯುತ್ತಿದ್ದೇನೆ. ನಿನ್ನೆ ವೈದ್ಯರು ಪರೀಕ್ಷೆ ಮಾಡಿದರು. ಅದರ ಫಲ ಬಹಳ ಸಮಾಧಾನಕರ. ರಕ್ತದ ಒತ್ತಡ 180ರಿಂದ 150ಕ್ಕೆ ಇಳಿದಿದೆ. 155–150. ನನ್ನ ವಯಸ್ಸಿಗೆ ಸಹಜ. ಈಗ ಮೂರು ದಿನಗಳಿಂದ ದಿನವೂ ಒಂದು ಮೈಲಿಗಿಂತ ಹೆಚ್ಚು ನಡೆಯುತ್ತಿದ್ದೇನೆ. ಅರ್ಧ ಅರ್ಧ ಗಂಟೆ ಎರಡು ಸಲ. ಅಂಜೋಳಿಯಲ್ಲಿದಕ್ಕಿಂತ ಹೆಚ್ಚಿನ ತಿರುಗಾಟ ಇದು. ನನ್ನ ಆರೋಗ್ಯದ ಚಿಂತೆ ಏನೂ ಇಲ್ಲ. ನಂದೀದುರ್ಗವನ್ನು ಬಿಟ್ಟು ಹೋಗುವ ಮಾತೇ ಇಲ್ಲ. ಹಿಂದಿನ ಹಾಗೆ ಮತ್ತೆ ನನಗೆ ಶಕ್ತಿ ಬರುವವರೆಗೆ ಇಲ್ಲಿಂದ

ಹೋಗುವ ವಿಚಾರವೇ ಮೂರ್ಖತನ. ಹಿಂದಿನ ಹಾಗೆ ನನಗೆ ಸಾಮರ್ಥ್ಯ ಬರಬೇಕು. ಇಲ್ಲವೆ ನಂದೀದುರ್ಗದ ಈ ಋತುಗುಣ ಮುಗಿಯಬೇಕು. ಜುಲೈ ತಿಂಗಳಲ್ಲಿ ಅದು ಮುಗಿಯುತ್ತದೆ"

(ಮುಂದುವರಿಯುವುದು)



ಗಾಂಧಿ ಸ್ಮಾರಕ ನಿಧಿ
75ನೇ ವರ್ಷದ ಸಂಸ್ಮರಣೆಗಾಗಿ
**ಅಂತರ ರಾಷ್ಟ್ರೀಯ ವಿಚಾರ ಸಂಕಿರಣ**

# 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ

# ವಿಚಾರ ಸಂಕಿರಣ: ಚಿತ್ರ ಸಂಪುಟ




ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಅವರಿಂದ ಚರಕ ತಿರುಗಿಸಿ ನೂಲು ತೆಗೆದು ವಿಚಾರ ಸಂಕಿರಣದ ಉದ್ಘಾಟನೆ




ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯ ಅವರಿಂದ ಉದ್ಘಾಟನಾ ನುಡಿಗಳು ..




ಮಾನ್ಯ ಮುಖ್ಯಮಂತ್ರಿಗಳು ಹಾಗೂ ಅತಿಥಿಗಳಿಂದ ಮಹಾತ್ಮ ಗಾಂಧಿ ಪ್ರತಿಮೆಗೆ ಪುಷ್ಪ ನಮನ ..




ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ಡಾ ವೂಡೇ ಪಿ ಕೃಷ್ಣ ಅವರಿಂದ ಅತಿಥಿಗಳ ಸ್ವಾಗತ ..




ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಶ್ರೀ ರಾಮಚಂದ್ರ ರಾಹಿ ಅವರಿಂದ ವಿಚಾರ ಸಂಕಿರಣ ಉದ್ಘಾಟನಾ ಸಮಾರಂಭದ ಅಧ್ಯಕ್ಷ ಭಾಷಣ ..







ಮಾನ್ಯ ಮುಖ್ಯಮಂತ್ರಿಗಳಿಗೆ ಗಾಂಧಿ ಸ್ಮಾರಕ ನಿಧಿಯ ಉಪಾಧ್ಯಕ್ಷ ಎಸ್ ಜಯದೇವ್ ಅವರಿಂದ ಧನ್ಯವಾದ ಅರ್ಪಣೆ




ಮಾನ್ಯ ಕಾನೂನು ಹಾಗೂ ಸಂಸದೀಯ ಮತ್ತು ಪ್ರವಾಸೋದ್ಯಮ ಸಚಿವರಾದ ಎಚ್ ಕೆ ಪಾಟೀಲ್ ಅವರಿಗೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಖಜಾಂಚಿ ಎಚ್ ಬಿ ದಿನೇಶ್ ಅವರಿಂದ ಕೈಮಗ್ಗದ ವಸ್ತ್ರ ಹೊದಿಸಿ ಗೌರವಾರ್ಪಣೆ .




ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ವೂಡೇ ಪಿ ಕೃಷ್ಣ ಅವರಿಗೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯರಾದ ಚಿತ್ತಯ್ಯ ಪೂಜಾರ್ ಅವರು ಸಮಾರಂಭದ ಸ್ಮರಣಿಕೆ ನೀಡಿ ಗೌರವಿಸಿದರು .



ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿಗಳಾದ ಎಂ ಸಿ ನರೇಂದ್ರ ಅವರಿಗೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯರಾದ ಚಿತ್ತಯ್ಯ ಪೂಜಾರ್ ಅವರು ಸಮಾರಂಭದ ಸ್ಮರಣಿಕೆ ನೀಡಿ ಗೌರವಿಸಿದರು.



ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಸಂಜೋಯ್ ಸಿಂಗ್ ಅವರಿಗೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯರಾದ ಅಬಿದಾ ಬೇಗಂ ಅವರು ಸ್ಮರಣಿಕೆ ನೀಡಿ ಗೌರವಿಸಿದರು .



ಮಹಾತ್ಮ ಗಾಂಧಿ ಮತ್ತು
ಕಸ್ತೂರ್ ಬಾ ಗಾಂಧಿ ಅವರ
ಮರಿ ಮೊಮ್ಮಗ ವಿಚಾರ
ಸಂಕಿರಣದ ದಿಕ್ಸೂಚಿ ಭಾಷಣ




ಗಾಂಧಿ ಶಾಂತಿ ಪ್ರತಿಷ್ಠಾನದ
ಅಧ್ಯಕ್ಷ ಕುಮಾರ್ ಪ್ರಶಾಂತ್
ಅವರು ವಿಚಾರ ಸಂಕಿರಣ
ಸಮಾರಂಭದ ದಿಕ್ಸೂಚಿ
ಅಧಿವೇಶನದ ಅಧ್ಯಕ್ಷ ಭಾಷಣ
ಮಾಡಿದರು .




ಕರ್ನಾಟಕ ಉಚ್ಚ ನ್ಯಾಯಾಲಯದ
ವಿಶ್ರಾಂತ ನ್ಯಾಯಮೂರ್ತಿ ಎಚ್
ಎನ್ ನಾಗಮೋಹನ ದಾಸ್
ಅವರು ಗಾಂಧಿ , ಪ್ರಜಾಪ್ರಭುತ್ವ ,
ಮತ್ತು ಭಿನ್ನಾಭಿಪ್ರಾಯಗಳು
ವಿಷಯ ಮಂಡನೆ ಮಾಡಿದರು .



ವಿಚಾರ ಸಂಕಿರಣದ ಉದ್ಘಾಟನೆಗೆ ಮುನ್ನ ಭಾರತ್ ಶಿಕ್ಷಣ ಸಂಸ್ಥೆಯ ಶಿಕ್ಷಕ ಸಮೂಹದಿಂದ ಗಾಂಧಿ ಪ್ರಣೀತ ಭಜನೆಗಳ ಗಾಯನ






ಅಧಿವೇಶನದಲ್ಲಿ ವಿಷಯ ಪರಿಣಿತರಿಗೆ ಮತ್ತು ನೂಲು ತೆಗೆಯುವ ಪ್ರದರ್ಶನ ನೀಡಿದ ಧಾರವಾಡದ ಗಾಂಧಿ ಶಾಂತಿ ಪ್ರತಿಷ್ಠಾನದ ಸಂಜೀವ್ ಕುಲಕರ್ಣಿ ಮತ್ತು ಮಕ್ಕಳಿಗೆ ಸ್ಮರಣಿಕೆ ನೀಡಿ ಗೌರವಿಸಲಾಯಿತು .

ಗಾಂಧಿ ಮೌಲ್ಯಗಳು ಮತ್ತು ತಂತ್ರಜ್ಞಾನ ಕ್ರಾಂತಿಯ ಶಕ್ತಿ : ಸಮನ್ವಯ ಸಾಧ್ಯತೆ ? ಅಧಿವೇಶನದಲ್ಲಿ ವಿಷಯ ಮಂಡನೆ




ಶ್ರೀ ಸ್ವಾಮಿ ನಿತ್ಯಸ್ತಾನಂದ ಸ್ವಾಮಿ
, ಶ್ರೀ ರಾಮಕೃಷ್ಣ ಮಠ ,
ಬೆಂಗಳೂರು .



ಡಾ . ಕೆಜೆವಿನೋ ಆರಂ ,
ಶಾಂತಿ ಆಶ್ರಮ ,
ಕೊಯಮತ್ತೂರು .



ಆರ್ಚ್ ಬಿಷಪ್
ರೆವೆರೆಂಡ್ ಫೆಲಿಕ್ಸ್
ಮಚಾಡೋ , ವಸಾಯಿ
, ಮುಂಬಯಿ .




ಶ್ರೀ ಕಾರ್ಲ್ ಮಲಮಡ್ , ತಂತ್ರಜ್ಞರು , ಸಾರ್ವಜನಿಕ ಜಾಲ ಸ್ವಾತಂತ್ರ್ಯದ ಪ್ರತಿಪಾದಕರು , ಪಬ್ಲಿಕ್ ರಿಸೋರ್ಸ್ ಸಂಸ್ಥೆ , ಅಮೇರಿಕ .



ಸುದೀಂದ್ರ ಕುಲಕರ್ಣಿ , ಅಂಕಣಕಾರರು ಮತ್ತು ' ನೂಲುವ ಚಕ್ರದ ಸಂಗೀತ ' ಕೃತಿಯ ಲೇಖಕರು , ಹಾಗೂ ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರ ಮಾಧ್ಯಮ ಸಲಹೆಗಾರರು .




ಕೊಳ್ಳೇಗಾಲ ಶರ್ಮ , ವಿಜ್ಞಾನ ಲೇಖಕರು ,ಮಾಜಿ ಮುಖ್ಯ ವಿಜ್ಞಾನಿಗಳು ಸಿ ಎಫ್ ಟಿ ಆರ್ ಐ , ಮೈಸೂರು .




ಪ್ರಸನ್ನ ಹೆಗ್ಗೋಡು ,ರಂಗಕರ್ಮಿ ಮತ್ತು ಗಾಂಧಿವಾದಿ .




ಉತ್ತಮ ಕುಮಾರ್ ಸಿನ್ಹಾ , ಗಾಂಧಿ ರಾಷ್ಟ್ರೀಯ ಮ್ಯೂಸಿಯಂ . ಪ್ರೊ .ಡಿ ಎಂ ದಿವಾಕರ್ , ಅಭಿವೃದ್ಧಿ ಸಂಶೋಧನಾ ಸಂಸ್ಥೆ , ಜಲ್ಸಯಾನಿ , ಬಿಹಾರ್ ಮತ್ತು ಪ್ರಸನ್ನ ಹೆಗ್ಗೋಡು ,ರಂಗಕರ್ಮಿ ಮತ್ತು ಗಾಂಧಿವಾದಿ .




ಪ್ರೊ . ಚಂದನ್ ಗೌಡ , ರಾಮಕೃಷ್ಣ ಹೆಗಡೆ ಪೀಠ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ . ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನಾ ಸಂಸ್ಥೆ , ಬೆಂಗಳೂರು .




ಶ್ರೀ ಅಣ್ಣಾಮಲೈ , ನಿರ್ದೇಶಕರು , ಗಾಂಧಿ ರಾಷ್ಟ್ರೀಯ ಮ್ಯೂಸಿಯಂ , ನವದೆಹಲಿ .




ಪ್ರೊ .ಜಿ ಬಿ ಶಿವರಾಜ್ , ಕಾರ್ಯಕ್ರಮಗಳ ನಿರ್ದೇಶಕರು , ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಇವರಿಂದ ವಿಚಾರ ಸಂಕಿರಣದ ಸಮಾರೋಪ ಸಮಾರಂಭಕ್ಕೆ ಸ್ವಾಗತ




ಸುಪ್ರೀಂ ಕೋರ್ಟ್ ನ ವಿಶ್ರಾಂತ ನ್ಯಾಯಮೂರ್ತಿ ಎನ್ ಸಂತೋಷ್ ಹೆಗಡೆ ಅವರು ವಿಚಾರ ಸಂಕಿರಣದ ಸಮಾರೋಪ ಭಾಷಣ ಮಾಡಿದರು .




ಶ್ರೀ ಎಚ್ ಕೆ ಪಾಟೀಲ್ , ಮಾನ್ಯ ಕಾನೂನು ಹಾಗೂ ಸಂಸದೀಯ ಮತ್ತು ಪ್ರವಾಸೋದ್ಯಮ ಸಚಿವರು ವಿಚಾರ ಸಂಕಿರಣದ ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷ ಭಾಷಣ ಮಾಡಿದರು .




ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಶ್ರೀ ಸಂಜೋಯ್ ಸಿಂಘ ಅವರು ಗಾಂಧಿ ಸ್ಮಾರಕ ನಿಧಿ ನಡೆದು ಬಂದ ದಾರಿಯನ್ನು ಪರಿಚಯಿಸಿದರು .




ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಸರ್ವೆಂಟ್ಸ್ ಆಫ್ ನಾಲೆಡ್ಜ್ ಸಂಸ್ಥೆಗಳು ಕೂಡಿ ಸಿದ್ಧಪಡಿಸಿರುವ ' ಆಲ್ ಇಂಡಿಯಾ ಗಾಂಧಿ ಲೈಬ್ರರಿ ' ಯ ಕಂಪ್ಯೂಟರ್ ಡ್ರೈವ್ ಗಳನ್ನು ಗಾಂಧಿ ಪ್ರಣೀತ ಸಂಸ್ಥೆಗಳ ಆಂತರಿಕ ಅಧ್ಯಯನದ ಬಳಕೆಗಾಗಿ ಸಮಾರಂಭದಲ್ಲಿ ಉಚಿತವಾಗಿ ನೀಡಲಾಯಿತು . ಆಯಾ ಸಂಸ್ಥೆಯ ಪದಾಧಿಕಾರಿಗಳು ಸಮಾರಂಭದಲ್ಲಿ ಈ ಡ್ರೈವ್ ಗಳನ್ನು ಸ್ವೀಕರಿಸಿದರು .




ಸಮಾರೋಪ ಸಮಾರಂಭದಲ್ಲಿ ಮಾನ್ಯ ಕಾನೂನು ಹಾಗೂ ಸಂಸದೀಯ ಮತ್ತು ಪ್ರವಾಸೋದ್ಯಮ ಸಚಿವರಿಗೆ ಗಾಂಧಿ ಬಳಗದ ಕ್ಯಾಪ್ಟನ್ ಬಿ ಎಂ ಹರಿಪ್ರಸಾದ್ ಅವರಿಂದ ಸ್ಮರಣಿಕೆ ನೀಡಿ ಗೌರವ ಸಲ್ಲಿಸಲಾಯಿತು.



ಹಲವಾರು ಗಣ್ಯರು , ಗಾಂಧಿ ಪ್ರಣೀತ ಸಂಘ ಸಂಸ್ಥೆಗಳ ಸದಸ್ಯರು , ಗಾಂಧಿ ವಿಚಾರ ಆಸಕ್ತರು , ರಾಷ್ಟ್ರೀಯ ಸೇವಾ ಯೋಜನೆಯ ಅಧಿಕಾರಿಗಳು , ವಿದ್ಯಾರ್ಥಿಗಳು ವಿಚಾರ ಸಂಕಿರಣ ಸಮಾರಂಭದಲ್ಲಿ ಪಾಲ್ಗೊಂಡು ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು .




ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯರಾದ ಪ್ರೊ ಜೀವನ್ ಕುಮಾರ್ ಅವರು ಸಮಾರೋಪ ಸಮಾರಂಭದಲ್ಲಿ ವಂದನೆ ಸಲ್ಲಿಸಿದರು .

# Overview of the Seminar "Mahatma Gandhiji For 21st Century"



This article provides a comprehensive overview of the recent International Seminar on "Mahatma Gandhi for the 21st Century," organized by the Karnataka Gandhi Smaraka Nidhi. Dr. Wooday P Krishna, President of the Karnataka Gandhi Smaraka Nidhi, offers insights into the seminar's key themes and discussions. The seminar delved into the enduring relevance of Gandhiji's principles, exploring how his ideas on truth, non-violence, and sustainable development continue to resonate in today's world. It also addressed contemporary challenges such as globalization, economic disparities, and the need for a revitalized democratic ethos.

**Inaugural Speech**

The Honourable Chief Minister of Karnataka, Shri Siddaramaiah, inaugurated the International Seminar on "Mahatma Gandhi for the 21st Century." In his inaugural address, he underscored the enduring significance of Mahatma Gandhi's ideology, highlighting its relevance beyond the 20th century and in today's world. The Chief Minister asserted that the proponents of caste inequality were responsible for Gandhiji's assassination and lamented the impact of the caste system, which has historically denied education to marginalized communities, deepening societal inequalities.

Siddaramaiah ji drew attention to the importance of Gandhi's principles in addressing contemporary challenges, emphasizing that his teachings remain a universal guide for fostering justice, equality, and peace. He also reflected on Stephen Hawking's words, stating that humanity need not seek happiness or tranquility on distant planets but should instead cultivate the values of mutual tolerance, coexistence, and fraternity on Earth.

**Chief Guest Address**

Shri H.K. Patil, in his address, highlighted the significance of the International Seminar on Mahatma Gandhi and commended the delegates for their active participation in promoting Gandhian values. He acknowledged the importance of the seminar in instilling these principles and congratulated all those involved for their commitment.

Shri Patil gave special recognition to Mr. Carl Malamud, who, inspired by Gandhian ideals, played a pivotal role in digitizing over 11,000 books related to Mahatma Gandhi and making them accessible through the Internet

Archive. This monumental effort, he noted, has helped preserve and disseminate Gandhi's teachings to a global audience. Shri Patil also expressed his gratitude to the Honorable Chief Minister Siddaramaiah for his unwavering support in the establishment of Gandhi Bhavans across 25 districts in Karnataka, furthering the spread of Gandhian thought in the state.

**Presidential Remarks**

Shri Ramachandra Rahi, in his presidential remarks, reflected on the founding of the Gandhi Smarak Nidhi, which was originally proposed by the Indian National Congress. He emphasized that this institution was not established by the government, but by the collective will of the people, with the aim of promoting Mahatma Gandhi's values and philosophy. Through the Nidhi, these ideals have been deeply ingrained within society.

Shri Rahi underscored the need for a strong relationship between society and the state to build a better and more just nation. He invoked the memory of Vinoba Bhave, revered as the first satyagrahi of India's freedom movement, who envisioned a non-violent and equitable social order across the country. Concluding his remarks, Shri Rahi called for the generation of people's power to protect and uphold the essence of democracy, reinforcing the Gandhian belief in the strength of collective action.

**Keynote Address: Shri Tushar Gandhi**

In his keynote address, Shri Tushar Gandhi expressed gratitude to the Honorable Chief Minister, Shri Siddaramaiah, for his steadfast support in advancing the work of the Gandhi Smarak Nidhi. He remarked on Gandhiji's remarkable ability to persuade and inspire people, a strength that seems increasingly rare in today's world.

Shri Tushar Gandhi urged the younger generation to familiarize themselves with Gandhi's principles, encouraging them to incorporate these values into their lives to keep Gandhiji's legacy alive. He stressed the critical need to initiate a unified movement aimed at preserving Gandhian ideals and called for introspection within Gandhian organizations to ensure these values continue to flourish in society.

**Session One: Gandhi, Conflict Resolution and Peace Building**

This session underscores the urgent need for fostering a more refined relationship between civilians in the face of increasing assaults on fundamental and human rights. In a world marked by extreme compartmentalization, driven by the industrialized division of labor, humanity has increasingly lost its sense of purpose and identity. Gandhiji, however, offered a holistic path, one that enables us to experience life in its fullness.

This holistic perspective is rooted in the realization of Truth as God, an eternal and all-encompassing reality. Gandhiji's approach to resolving conflicts through non-violent means—embodied in Satyagraha—serves as a guiding principle even today. In the current scenario, Satyagraha can be adopted by upholding truth, speaking it fearlessly, and standing in solidarity with those who dare to speak the truth, making it a powerful tool for justice and change

**Session Two: Gandhi for Sustainable and Equitable Development**

The session emphasized that the creation of wealth must be achieved through fair and ethical means, without jeopardizing sustainable development, and that this should form the foundation of economic policy. The philosophy of "simple living and high thinking" was highlighted as a guiding principle for life. Speakers focused on Gandhian ideas, which are spiritually oriented and adopt a holistic perspective on life and society.

A strong call was made to protect the earth, with the reminder that by saving the planet, we ultimately save ourselves. The speakers cautioned against human greed, warning that the relentless exploitation of resources will lead to their depletion. If unchecked, this greed will result in the earth becoming a barren wasteland. The session concluded with an urgent appeal to adopt simpler, environmentally friendly lifestyles to ensure the sustainability of the planet for future generations.

**Session Three: Gandhi, Democracy and Dissent**

The session emphasized that dissent is an integral part of a democratic system. Gandhiji envisioned a society where citizens actively voiced dissent against tyranny and violence. His concept of democracy was rooted in the vision of a discrimination-free India, anchored in the principles of fearlessness and 'Aparigraha' (non-possession), which led him to develop the concept of 'Satyagraha.'

Speakers expressed concern over the increasing influence of corporate power in politics, warning that it threatens the core values necessary for a functioning democracy. They noted that contemporary politics often seems detached from essential human values, posing significant challenges. The session also explored the need for political reforms, fundamental rights, the political system to ensure the building of a valued based society.

**Session Four: Gandhian Values and the Revolutionary Power of Technology: Is a Synthesis Possible?**

The session emphasized the enduring relevance of Gandhiji's principles and values, asserting that they will remain vital as long as humanity exists. A reference to the book *Music of the Spinning Wheel: Mahatma Gandhi's Manifesto for the Internet Age* highlighted the transformative power of modern technologies, dispelling the myth that Gandhi was opposed to scientific progress. In fact, Gandhiji supported the use of small, localized, and village-centric technologies to empower India's villages and make them self-reliant.

The session also acknowledged the contributions of Rajiv Gandhi and his advisor Sam Pitroda, whose efforts laid the foundation for India's telecom revolution, which has since put the telephone into the hands of the masses. The session concluded by positing the internet as an avatar of the spinning wheel provided the evolution of the Digital Era is guided by mankind's ancient wisdom to minimize its perils and maximize its promises and a call for all of us to become 'Internet Sathyagrahis.'

**Session Five: Dialogue Among Religions for Peace and Harmony**

The session enlightened the audience and students about Gandhiji's principles of Sathya (truth) and Ahimsa (non-violence), emphasizing that morality cannot be practiced without truth. It was highlighted that humanity, morality, and spirituality are fundamental aspects of any religion, and by focusing on spirituality, one can achieve true morality.

The session drew on examples from Ramakrishna Paramahamsa and Swami Vivekananda to illustrate that there is no higher religion than truth and righteousness and that a deep yearning for God is essential. It stressed the urgent need for cultivating friendly relationships and promoting peace. A common threat to all faith groups is the tendency to reduce the freedom of religion to the mere freedom of private worship, and all believers should therefore strengthen religious freedom by promoting inter-religious dialogue

The session concluded with a reaffirmation of Gandhiji's vision of Sarvodaya (progress for all) and peace, aiming to address relevant social issues and promote community development. It emphasized the importance of following Gandhiji's ideology of non-violence to restore peace in society and the state.

**Session Six: Gandhi, Globalization And Global Governance**

The session provided a thought-provoking analysis of globalization, highlighting its impact on the autonomy of nation-states. It discussed how globalization enforces a convergence of national policies, potentially undermining democracy and diminishing the legitimacy of national political systems, thereby altering the nature of sovereignty.

The speakers noted a troubling trend where the Gross Domestic Product (GDP) is decreasing, steering India towards a plutocracy. This extreme concentration of income and wealth is expected to exert disproportionate influence on both society and government. Additionally, the session highlighted that globalization tends to favor capital-intensive, labor-saving technologies.




‘ ಗಾಂಧಿ ಮತ್ತು ವಿಶ್ವ ಶಾಂತಿ ‘ ಛಾಯಾ ಚಿತ್ರ ಪ್ರದರ್ಶನ




ಮಹಾದೇವ ದೇಸಾಯಿ ಸಭಾಂಗಣದ ವೇದಿಕೆಯ ನೋಟ ..

